ಪ್ರಭಾತ ಸಾಹಿತ್ಯ ೬

# ಹೊಟ್ಟೆಗಿಲ್ಲದ್ದೇಕೆ?

ಮಿನೂ ಮಸಾನಿ
ಬೊಂಬಾಯಿ ಮೇಯರು

ಪ್ರಭಾತ ಸಾಹಿತ್ಯ

# ಮುನ್ನುಡಿ

ಈ ಪುಸ್ತಕ ಬರೆದ ಮಿನೂ ಮಸಾನಿ ಒಳ್ಳೇ ಲೇಖಕರು. ಅವರ 'ನಮ್ಮ ಹಿಂದುಸ್ಥಾನ'ದ ಜನಪ್ರಿಯತೆಯೆ ಅದಕ್ಕೆ ದೃಷ್ಟಾಂತ. 'ನಮ್ಮ ಹಿಂದುಸ್ಥಾನ' ಭಾರತದ ಎಲ್ಲ ಭಾಷೆಗಳಿಗೂ ಭಾಷಾಂತರವಾಗಿದೆ.

ಕನ್ನಡದಲ್ಲೂ ಇದೆ.

ನಮ್ಮ ದೇಶದ ಆಹಾರ ಸಮಸ್ಯೆಯ ವಿಷಯವಾಗಿ ಅವರು ಬರೆದ ಈ ಚಿಕ್ಕ ಪುಸ್ತಕ ಬಹಳ ಸಮಯೋಪಕಾರಿಯಾದ ಬರಹ.

ಇವೊತ್ತು ಪೂಜ್ಯಮಾತೆ ಕಸ್ತೂರಿ ಬಾ ಪ್ರಥಮ ಮಾಸಿಕ. ಈ ಪವಿತ್ರ ದಿನದಲ್ಲಿ ಇದನ್ನು ಪ್ರಕಟಿಸಲು ಎಲ್ಲ ಅನುಕೂಲವನ್ನೂ ಮಾಡಿಕೊಟ್ಟ, ಬೆಂಗಳೂರು ಮಾಜಿ ಪೌರಸಭಾ ಸದಸ್ಯರೂ, ಸುಪ್ರಸಿದ್ಧ ವ್ಯಾಪಾರಿಗಳೂ ಆದ ಶ್ರೀ. ವಿ. ವೆಂಕಟರಮಣಪ್ಪನವರಿಗೆ ವಂದನೆಗಳನ್ನು ಅರ್ಪಿಸುತ್ತೇನೆ.

೨೨-೩-೪೪.

ಸಿದ್ದವನಹಳ್ಳಿ, ಕೃಷ್ಣಶರ್ಮ

**ಬೆಲೆ ೦—೬—೦**

# ಹೊಟ್ಟೆಗಿಲ್ಲದ್ದೇಕೆ?

## ಆಹಾರದ ಬಗ್ಗೆ ಕೆಲವು ಸಂಗತಿ

ಮಿನೂ ಮಸಾನಿ
ಬೊಂಬಾಯಿ ಮೇಯರು

ಅನುವಾದಕ
**ಸಿದ್ದವನಹಳ್ಳಿ ಕೃಷ್ಣಶರ್ಮ**

೧೯೪೪

(ಈ ಪುಸ್ತಕ ಮಾರಿ ಬರುವ ಹಣದ ಕೆಲವು ಭಾಗವನ್ನು ಕಸ್ತೂರಿಬಾ ಸ್ಮಾರಕನಿಧಿಗೆ ಕೊಡಲಾಗುತ್ತದೆ.)

# ಹೊಟ್ಟೆಗಿಲ್ಲದ್ದೇಕೆ?

## ೧

## ಇಲಿ ಹೆಗ್ಗಣಕ್ಕೂ ತರವಲ್ಲ

ಹಿಂದುಸ್ಥಾನ ಬಲು ಸೋಜಿಗದ ವಿರೋಧಾಭಾಸಗಳ ಸೀಮೆ. ಆದರೆ ಎಲ್ಲಕ್ಕಿಂತ ಇವೊತ್ತು ಒಡೆದುಕಾಣುವ ವಿಚಿತ್ರ ರುದ್ರಭೀಕರ ಆಭಾಸ ಹಿಂದುಸ್ಥಾನದ ಅನ್ನ ಸರಬರಾಯಿಯದು.

ನಮ್ಮ ಈ ದೇಶದಲ್ಲಿ ಬೇಸಾಯಕ್ಕೇನು ಕಡಿಮೆಯಿಲ್ಲ. ವಿಸ್ತಾರವಾದ ಭೂಭಾಗ ಬೇಸಾಯವಾಗುತ್ತಿದೆ. ೩೦ ಕೋಟಿ ಎಕರೆ ಹೊಲ ಪೈರು ಬೆಳೆಯುತ್ತಿದೆ. ಆದರಲ್ಲಿ ಶೇ. ೮೦ರಷ್ಟು ಕಾಳುಕಡ್ಡಿ ಬೆಳೆಯುತ್ತದೆ. ಹಿಂದುಸ್ಥಾನದಲ್ಲಿರುವ ನೀರಾವರಿ ನೆಲ– ಇನ್ನುಳಿದ ಆರು ದೊಡ್ಡ ದೇಶಗಳನ್ನೂ, ಅಮೆರಿಕದ ಸಂಯುಕ್ತ ಸಂಸ್ಥಾನ ಸೇರಿ, ಒಟ್ಟುಗೂಡಿಸಿದರೂ ಆಗುವ ನೀರಾವರಿ ನೆಲಕ್ಕಿಂತ ಹೆಚ್ಚು.

ಇಷ್ಟೆಲ್ಲ ಭೂಸಮೃದ್ಧಿಯಿರುವುದು ಮಾತ್ರವೇ ಅಲ್ಲ. ಈ ನೆಲವೆಲ್ಲ ಹುಲುಸಾದುದು. ನಮ್ಮ ಭೂಗುಣದಂತೆಯೇ ವಾಯುಗುಣವೂ ಹಿತವಾದುದು, ಆಯಾ ಸೀಮೆಗೆ ಅನುಕೂಲವಾದುದು. ನೆಲವನ್ನು ಸಲಹಲು ದಟ್ಟವಾದ ಕಾಡು ಇದೆ. ನಮ್ಮ ಮನ್‌ಸೂನ್ ಮಳೆ, ಹೇರಳವಾದ ನದಿಗಳು ಧಾರಾಳವಾಗಿ ನೀರು ಒದಗಿಸುತ್ತವೆ.

ಈ ಭೂಮಿಯನ್ನು ಉತ್ತು ಬಿತ್ತಿ ಬೇಸಾಯಮಾಡಲು ಅಪಾರವಾದ ಜನಬಲವಿದೆ. ಚೀನಾ ಒಂದನ್ನು ಬಿಟ್ಟರೆ ನಮ್ಮ ಜನಬಲಕ್ಕೆ ಸಾಟಿ ಎಲ್ಲೂ ಇಲ್ಲ. ನಮ್ಮ ೪೦ ಕೋಟಿ ಜನರಲ್ಲಿ ೩೫ ಕೋಟಿಗಿಂತ ಕಡಮೆಯಿಲ್ಲದೆ ಹಳ್ಳಿಗಳಲ್ಲಿದಾರೆ. ಅವರಲ್ಲಿ ನೂರಕ್ಕೆ ೮೦ರಷ್ಟು ಜನ ಬೇಸಾಯದ ಕೆಲಸಮಾಡುತ್ತಾರೆ.

ನಮಗೆ ಪಶುಸಂಪತ್ತೂ ಬೇಕಾದಷ್ಟಿದೆ. ಬೇಸಾಯಕ್ಕೆ ದನವೇ

ಕಾನೆ ಮುಖ್ಯ. ಇಡೀ ಜಗತ್ತಿನಲ್ಲಿರುವುದು ೭೦ ಕೋಟಿ ದನ. ಅದರಲ್ಲಿ ೨೦ ಕೋಟಿ ನಮ್ಮವು. ಎಂದರೆ ಶೇ. ೨೮.೫ ರಷ್ಟು.

**ಆದರೂ** - ಮೊನ್ನೆ ಮೊನ್ನೆ ಅಮೆರಿಕದ (ಹಾಟ್ ಸ್ಪ್ರಿಂಗ್ಸ್) ಲ್ಲಿ ನಡೆದ ಪರಿಷತ್ತಿನಲ್ಲಿ ಭಾರತ ಸರಕಾರದ ಪ್ರತಿನಿಧಿಗಳು ಭಾರತದಲ್ಲಿ ಸಾಧಾರಣ ದಿನಗಳಲ್ಲಿ ಸುಮಾರು ೧/೩ ಭಾಗದಷ್ಟು ಜನ ಭಾರತೀಯರಿಗೆ ಮಾಮೂಲಾಗಿ ಅರೆಹೊಟ್ಟೆ ಎಂದು ಒಪ್ಪಿಕೊಂಡರು. ಹತ್ತುವರುಷದ ಕೆಳಗೆ- ಬಂಗಾಳದ ಒಕ್ಕಲಿಗರು ಹೆಚ್ಚಾಗಿ ಬಳಸುವ ಆಹಾರ ಇಲಿಗಳಿಗೆ ಕೂಡ ತರವಲ್ಲ; ನಾಲ್ಕಾರು ವಾರಕ್ಕಿಂತ ಹೆಚ್ಚಾಗಿ ಈ ಆಹಾರ ತಿಂದು ಇಲಿಗಳೂ ಬದುಕಲಾರವು ಎಂದು ಬಂಗಾಳದ ಆರೋಗ್ಯಶಾಖಾಧಿಕಾರಿ ಹೇಳಿದ. ಅದು ಹತ್ತುವರುಷದ ಮಾತು. ಈ ಹೊತ್ತು ಪರಿಸ್ಥಿತಿ ಇನ್ನೂ ಕೆಟ್ಟು ಕಂಗಾಲಾಗಿದೆ. ಪಂಡಿತ ಹೃದಯನಾಥ ಕುಂಜರು, ಶ್ರೀ. ಕೆ. ಸಂತಾನಂ ಇವರು, ಬಂಗಾಳದಲ್ಲಿ ಹೊಟ್ಟೆಗಿಲ್ಲದ್ದಕ್ಕೇ ವಾರವಾರವೂ ಒಂದು ಲಕ್ಷ ಜನ ಸಾಯುತ್ತಿದಾರೆಂದು ಅಂದಾಜು ಮಾಡಿದಾರೆ. ಇದಕ್ಕಿಂತಲೂ ಹೆಚ್ಚು ಬೆಳಕನ್ನು ೧೯೪೩, ನವೆಂಬರ್ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ವಿಶೇಷ ಸುದ್ದಿಗಾರನ ವರದಿ ಚೆಲ್ಲುತ್ತಿದೆ.

'ನಾಮಶೂದ್ರರೆಂಬ ಕೂಲಿಗಾರಜಾತಿಯ ಜನಸಂಖ್ಯೆ ಇಡೀ ಬಂಗಾಳದಲ್ಲಿ ೩೦ ಲಕ್ಷ. ಅವರಲ್ಲಿ ಸುಮಾರು ೧೦ ಲಕ್ಷ ಸತ್ತಿರಬಹುದು. ಇದೇನು ಅಸಂಭವವಲ್ಲ.'

ಈ ಪರಿಸ್ಥಿತಿಗೆ ಏನು ಉತ್ತರ ಕೊಡಬೇಕು? ಏನು ಸಮಾಧಾನ ಹೇಳಬೇಕು? ಬೆವರ್ಲಿ ನಿಕೊಲ್ಸ್ ಹೇಳಿದ ಹಾಗೆ ಇದೆಲ್ಲವೂ ಪ್ರಕೃತಿಮಾತೆಯ ಶಾಪ, ಆಕೆಯ ತಪ್ಪು ಎನ್ನೋಣವೇ? ಹಾಗನ್ನುವುದು ಸುಲಭವಾದ ಉಪಾಯ, ಸರಿ. ಆದರೆ ಯೋಗ್ಯ ಉಪಾಯಕ್ಕಲ್ಲ. ಮೇಲೆ ಹೇಳಿದ ಟೈಮ್ಸ್ ಆಫ್ ಇಂಡಿಯಾ ಸುದ್ದಿಗಾರ ಇನ್ನೂ ಏನು ಹೇಳುತ್ತಾನೆ ಗೊತ್ತೆ?

'ಈ ಐವತ್ತು ವರುಷದಲ್ಲಿ ಕಾಣದಷ್ಟು ಹುಲುಸಾಗಿ ಬೆಳೆದಿದೆ ಪೈರು ಬಂಗಾಳದಲ್ಲಿ ಈ ಸಲ. ಬೀಗಿ ಬೆಳೆದ ಭತ್ತದ ಗದ್ದೆಯ ನಡುವೆ ಬಿಳುಪೇರಿ

ಹೋದ ಮಾನವಶವವನ್ನು ಕಾಣುವ ಭೀಕರಚಿತ್ರ ಇಂದು ಪೂರ್ವಬಂಗಾಳ ದಲ್ಲಿ ಬಹಳ ಸಾಮಾನ್ಯವಾಗಿದೆ.'

ಇದಕ್ಕಿಂತಲೂ ಹೆಚ್ಚಿನ 'ಜವಾಬದಾರಿಯ' ಉತ್ತರ ಬೇಕೆ? ಬೇಕಾದರೆ ಹೌಸ್ ಆಫ್ ಕಾಮನ್ಸ್‌ನ ಇತ್ತೀಚಿನ ಚರ್ಚೆಯಲ್ಲಿ ಸರ್ ಜಾನ್ ಆಂಡರ್ಸನ್ ಹೇಳಿದ್ದನ್ನು ನೋಡಿ:

'೧೯೪೧, ೧೯೪೨ರ ಭತ್ತದ ಬೆಳೆ ಅತ್ಯುತ್ತಮವಾಗಿತ್ತು. ಅಷ್ಟು ಬೆಳೆ ಬಂದದ್ದು ಬಹಳ ಅಪರೂಪ. ಖಂಡಿತವಾಗಿಯೂ ಆ ಸ್ಥಳೀಯ ಆವಶ್ಯಕತೆಗಿಂತ ಹೆಚ್ಚಾಗಿಯೆ ಬೆಳೆದಿತ್ತು.'

ಅಲ್ಲ. ಯಾರದೇ ತಪ್ಪಿರಲಿ, ಪ್ರಕೃತಿಮಾತೆಯದಂತೂ ಅಲ್ಲ.

ಹಾಗಾದರೆ ಈ ಒಗಟಿಗೆ ಏನು ಉತ್ತರ?

---

೨

## ೧೧ ಕೋಟಿಗೆ ಅನ್ನವಿಲ್ಲ

ಇವತ್ತು ಏನಾಗುತ್ತಿದೆಯೋ ತಿಳಿದುಕೊಳ್ಳಲು, ಯುದ್ಧ ಪ್ರಾರಂಭವಾಗುವ ಮೊದಲು ನಮ್ಮ ಆಹಾರ ಪರಿಸ್ಥಿತಿ ಹೇಗಿತ್ತೋ ಅದರ ಫಲವಾಗಿ ನಮ್ಮ ತಲೆಯ ಮೇಲೆ ಏನು ಕಷ್ಟ ಬಂತೋ ತಿಳಿದುಕೊಳ್ಳುವುದು ಉತ್ತಮ ಮಾರ್ಗ. ಹಾಗಾದರೆ ಒಂದು ಕೆಲಸ ಮಾಡೋಣ. ಸಾಧಾರಣ ದಿನಗಳಲ್ಲಿ ನಮಗೆ ಬೇಕಾದ ಆಹಾರ ಎಷ್ಟು? ನಾವು ಬೆಳೆದದ್ದೆಷ್ಟು? ಆಯವ್ಯಯ ಪಟ್ಟಿಯನ್ನು ತಯಾರುಮಾಡೋಣ.

ಬೇರೆ ಬೇರೆ ಪದಾರ್ಥಗಳ ಆಹಾರ ಸಾಮರ್ಥ್ಯ ಎಷ್ಟು, ಎಂಥ ಆಹಾರವಾದರೆ ಸರ್ವಗುಣ ಪರಿಪೂರ್ಣವಾಗಿ ಆದರ್ಶವಾದೀತು, ಎಂಬ ರಗಳೆ ಇಲ್ಲಿ ಬೇಡ. ಅಂಥ ಸುಖಸಂಕಥಾ ವಿನೋದದ ಶ್ರೀಮಂತಿಕೆಗೆ ಇದು ಸಮಯವಲ್ಲ. ಅದರಲ್ಲೂ ಕೇವಲ ಭಾರತೀಯರಾದ ನಮಗೆ! ಜನರು ಹೊಟ್ಟೆಗಿಲ್ಲದೆ ಸಾಯುತ್ತಿರುವಾಗ ನಮಗೆ ಅಷ್ಟು ಜಂಬ ಬೇಕಾಗಿಲ್ಲ. ಹೇಗಾದರೂ ಮಾಡಿ ಅವರನ್ನು ಬದುಕಿಸಿದರೆ ಸಾಕೆಂಬ ಚಿಂತೆಯೊಂದೇ ಸಾಕು. ಭಾರತ ಸರ

ಕಾರದ ಆಹಾರ ಪರಿಶೋಧನ ಪ್ರಯೋಗಶಾಲೆಯ ಅಧ್ಯಕ್ಷರು ಡಾ. ಅಕ್ರಾಯ್ಡ್ ಹೇಳಿದ ಹಾಗೆ: 'ಪುಷ್ಟಿಯಾದ ಸರಿಯಾದ ಆಹಾರವಲ್ಲ ಮೊದಲ ಪ್ರಶ್ನೆ; ಹೊಟ್ಟೆತುಂಬಾ ಅನ್ನ! ಅನ್ನದ ಗುಣ, ಎಂಥದ್ದೋ ಈಗ ಬೇಡ. ಹೊಟ್ಟೆ ತುಂಬುವಷ್ಟು ಪ್ರಮಾಣದ ಮಾತ್ರೊಂದೇ ಸಾಕು.

ಎಷ್ಟು ಅನ್ನ ತಿನ್ನಬೇಕು? ನಮ್ಮಲ್ಲಿ ಪ್ರತಿಯೊಬ್ಬರಿಗೂ ಬೇರೆ ಬೇರೆ ಅಭಿಪ್ರಾಯವಿರಬಹುದು! ಆದರೆ ಇಲ್ಲಿ ನಾವು ಪ್ರಸ್ತಾಪಿಸುತ್ತಿರುವುದು ಸುಖಭೋಜನದ ಮಾತಲ್ಲ, ಜೀವ ಹಿಡಿದಿರಲು ಅಗತ್ಯವಾದ ಪ್ರಮಾಣವನ್ನು.

ನಮಗೆ ಬೇಕಾದ್ದೆಷ್ಟು, ನಮಗೆ ದೊರೆಯುವುದೆಷ್ಟು – ಈ ಆಯವ್ಯಯ ಪಟ್ಟಿಮಾಡಲು, ಒಂದೊಂದು ಆಹಾರ ಪದಾರ್ಥವನ್ನು ಬಿಡಿಯಾಗಿ ಲೆಕ್ಕ ಹಾಕಿ ನೋಡೋಣ. ನಮಗೆ ಸಿಗುವ ಕಟ್ಟಕಡೆಯ ಅಂಕೆಗಳ ಪ್ರಕಾರ – ನಾವು ಬೆಳೆವುದು ೬.೧ ಕೋಟಿ ಟನ್ ಧಾನ್ಯ, ೮೫ ಲಕ್ಷ ಟನ್ ಬೇಳೆ. ಒಟ್ಟು ೬.೯೫ ಕೋಟಿ ಟನ್. ಇದರಲ್ಲಿ ಬೀಜಕ್ಕಾಗಿ ೭೦ ಲಕ್ಷ ಟನ್ ಕಳೆಯಬೇಕು. ಅಂದರೆ ಉಳಿಯುವುದು ೬.೨೫ ಕೋಟಿ ಟನ್ ಮಾತ್ರ. ನಮಗೆ ತಲಾ ದಿನಕ್ಕೆ ಒಂದು ಪೌಂಡು ಧಾನ್ಯ, ಅರ್ಧ ಪೌಂಡು ಬೇಳೆ ಬೇಕೆಂದು ಆಹಾರಶಾಸ್ತ್ರಜ್ಞರು ಹೇಳುತ್ತಾರೆ. ಅದರಂತೆ ಲೆಕ್ಕಹಾಕಿದರೆ ೩೦ ಕೋಟಿ ವಯಸ್ಕರಾದ ಜನಕ್ಕೆ ೭ ೩ ಕೋಟಿ ಟನ್ ಬೇಕಾಗುತ್ತದೆ. ಅಂದರೆ ಕಾಳು ಬೆಳೆಗಳ ಬೆಳೆಯಲ್ಲಿ ೧ ಕೋಟಿ ೫ ಲಕ್ಷ ಟನ್ ನಮಗೆ ಸಾಲದೆ ಬರುತ್ತದೆ.

ಹೀಗೆಯೆ ಹಾಲಿನ ಲೆಕ್ಕವನ್ನೂ ಮಾಡಿದರೆ, ನಮಗೆ ತಲಾ ದಿನವೊಂದಕ್ಕೆ ೪|| ಔನ್ಸ್ ಹಾಲು ಸಿಗುತ್ತದೆಯೆಂದು ತಿಳಿಯುತ್ತದೆ. ಅದರಲ್ಲಿ ೬೦% ತುಪ್ಪಮಾಡಲು ಹೋಗುತ್ತದೆ. ೩೦% ಮಾತ್ರ ಕುಡಿಯಲು ಸಿಗುತ್ತದೆ. ಪಂಡಿತರು ಹೇಳುವಂತೆ ತಲೆಗೆ ೩೦ ಔನ್ಸ್ ಆದರೂ ಹಾಲು ಬೇಕು. ಒಟ್ಟು ಲೆಕ್ಕಮಾಡಿದರೆ ನಮಗೆ ಹಾಲು ಬಹಳ ಎಂದರೆ ಬಹಳ ಕಡಮೆಬೀಳುವುದು ಗೊತ್ತಾಗುತ್ತದೆ.

ಇಂಥ ಪುಸ್ತಕದಲ್ಲಿ ಇಷ್ಟೆಲ್ಲ ಲೆಕ್ಕ ಮಾಡಿದರೆ ಬೇಸರವಾಗುತ್ತದೆ. ಆದರೆ ನಮ್ಮ ಪುಣ್ಯಕ್ಕೆ ಅನುಕೂಲವಾಗಿ ಒಂದು ಅಳತೆಯ ಪದ್ಧತಿಯಿದೆ. ನಮ್ಮ ಆಹಾರಪದಾರ್ಥಗಳ ಸರಬರಾಯಿಯನ್ನೆಲ್ಲ ಈ ಅಳತೆಯಲ್ಲಿ ಲೆಕ್ಕ ಹಾಕಬಹುದು. ಆ ಅಳತೆ ಕ್ಯಾಲರಿಗಳದು. ಉದ್ದವನ್ನು ಅಂಗುಲಗಳಲ್ಲಿ, ಅಡಿ

ಗಜಗಳಲ್ಲಿ ಅಳೆಯುವಂತೆ; ತೂಕವನ್ನು ಸೇರು ಧಡಿಯು ಮಣಗಳಲ್ಲಿ ಅಳೆಯುವಂತೆ; ಆಹಾರ ಪದಾರ್ಥದಿಂದ ಸಿಗುವ ಬಲವನ್ನು ಕ್ಯಾಲರಿಗಳಲ್ಲಿ ಅಳೆಯುತ್ತಾರೆ. ಉದಾ: ಒಂದು ಔನ್ಸ್ ಅಕ್ಕಿಗೆ ೯೯ ಕ್ಯಾಲರಿ, ಒಂದು ಔನ್ಸ್ ಕುರಿ ಮಾಂಸಕ್ಕೆ ೪೨ ಕ್ಯಾಲರಿ, ಒಂದು ಔನ್ಸ್ ಹಾಲಿಗೆ ೧೮ ಕ್ಯಾಲರಿ.

ಸುಮ್ಮನೆ ಪ್ರಾಣದಿಂದಿರಲು, ಅಲ್ಲದೆ ಆರೋಗ್ಯವಾಗಿ ನಮ್ಮ ದಿನಚರಿ ನಡಸಲು ನಾವು ಎಷ್ಟು ಕ್ಯಾಲರಿ ತಿನ್ನಬೇಕು? ಇದಕ್ಕೆ ಉತ್ತರ ಒಂದಲ್ಲ, ಹಲವು: ನಮ್ಮ ವಯಸ್ಸು, ಲಿಂಗ, ಉದ್ಯೋಗ, ನಾವಿರುವ ಸ್ಥಳದ ಹವಾಮಾನಗಳಿಂದ ನಮ್ಮ ಆವಶ್ಯಕತೆಯೂ ವ್ಯತ್ಯಾಸವಾಗುತ್ತದೆ. ಉಷ್ಣದೇಶದಲ್ಲಿರುವವನಿಗಿಂತ ಶೀತದೇಶದಲ್ಲಿರುವವನಿಗೆ ಹೆಚ್ಚು ಅನ್ನ ಬೇಕು. ಕಷ್ಟಪಟ್ಟು ದುಡಿವ (ಬುದ್ಧಿಯ ಕೆಲಸವಾದರೂ) ಕೆಲಸಗಾರನಿಗೆ ಸುಖವಸತಿಯವನಿಗಿಂತ ಹೆಚ್ಚು ಅನ್ನಬೇಕು. ಬಸಿರಾದಾಗ ವಿನಾ ಹೆಂಗಸಿಗಿಂತ ಗಂಡಸಿಗೆ ಹೆಚ್ಚು ಅನ್ನ ಬೇಕು. ಅಮೆರಿಕಾದಲ್ಲಿ ಸಾಧಾರಣ ಜನಕ್ಕೆ ದಿನಕ್ಕೆ ೩,೫೦೦ ಕ್ಯಾಲರಿ ಆಗುತ್ತದೆ. ಅಮೆರಿಕಾದ ಸಿಪಾಯಿಗಳಿಗೆ ೪,೫೦೦ ಕ್ಯಾಲರಿ ಕೊಡುತ್ತಾರೆ. ಜರ್ಮನಿಯಲ್ಲಿ ಗಿರಣಿ ಕೂಲಿಗಾರರಿಗೆ ೪೦೦೦ ಕ್ಯಾಲರಿ ಕೊಡುತ್ತಾರೆ. ಬೆಲ್ಜಿಯಂ ಪರಾಕ್ರಾಂತವಷ್ಟೆ. ಅಲ್ಲಿ ತಲೆಗೆ ೩೪೦೦ ಕ್ಯಾಲರಿ. ಹಿಂದಿನ ವರ್ಷ ನೆರೆನ ಹಾಟ್ ಸ್ಪ್ರಿಂಗ್ಸ್ ಪರಿಷತ್ತು ಹೀಗೆ ಪಡಿತರವನ್ನು ಗೊತ್ತುಮಾಡಿತು:

| | |
|---|---|
| ಗಂಡಸರು | ೨,೫೦೦—೪,೫೦೦ |
| ಹೆಂಗಸರು | ೨,೧೦೦—೩,೦೦೦ |
| ಮಕ್ಕಳು | ೧,೨೦೦—೩,೮೦೦ |

ಹಿಂದುಸ್ಥಾನದಲ್ಲಿ ನಾವು ಯಾವಾಗಲೂ ಮಿತವಾದಿಗಳು ಭಾರತ ಸರಕಾರದ ಪಂಡಿತರ ಲೆಕ್ಕದಂತೆ ನಮಗೆ ದಿನವೊಂದಕ್ಕೆ ತಲಾ ೨೮೦೦ ಕ್ಯಾಲರಿ ಸಾಕಂತೆ. ಅದರಲ್ಲಿ ೨೦೦ ಕ್ಯಾಲರಿ ವ್ಯರ್ಥಪರ್ಥಕ್ಕಾಗಿ. ಅಂದರೆ ನಾವು ಚೆನ್ನಾಗಿರಲು ಒಂದು ವರ್ಷಕ್ಕೆ ೧೦ ಲಕ್ಷ ಕ್ಯಾಲರಿ ಸಾಕು ಎಂದು. ಇದರಂತೆ ೧೯೪೧ರಲ್ಲಿ ನಮಗೆ, – ಆಗ ನಾವು ೩೯ ಕೋಟಿ ಜನ – ೩೯ ಲಕ್ಷ ಕೋಟಿ ಕ್ಯಾಲರಿ ಬೇಕಾಗಿತ್ತು.

ಇದು ನಮಗೆ ಬೇಕಾದ್ದು. ನಮಗಿದ್ದದ್ದು ಎಷ್ಟೋ ನೋಡೋಣ. ಹಿಂದುಸ್ಥಾನ ಆಹಾರದ ವಿಷಯದಲ್ಲಿ ಸ್ವಸಂಪೂರ್ಣವೇನಲ್ಲವಾಗಲಿ. ಸಾಧಾರಣ ದಿನಗಳಲ್ಲಿ ಕೊಂಚ ಹೆಚ್ಚುಕಡಮೆ ಸರಿಹೋಗುತ್ತದೆ. ಯುದ್ಧಕ್ಕೆ ಮೊದಲು ನಾವು ಆಮದುಮಾಡುತ್ತಿದ್ದ ಅಕ್ಕಿ ನಮ್ಮ ಇಡೀ ಅಕ್ಕಿ ಉಪಯೋಗದಲ್ಲಿ ೪-೫% ಮಾತ್ರ. ನಾವು ರಫ್ತುಮಾಡುತ್ತಿದ್ದ ಗೋಧಿ, ಅಕ್ಕಿ ನಮ್ಮ ಬೆಳೆಯ ೩%, ೧% ಮಾತ್ರ. ಎರಡನ್ನೂ ಈ ಸ್ಥೂಲಲೆಕ್ಕಾಚಾರದಲ್ಲಿ ಬಿಟ್ಟು ಬಿಡಬಹುದು. ಅಂದರೆ ನಮಗೆ ಸಿಗುವ ಆಹಾರ ನಾವು ಬೆಳೆದದ್ದು ಎಷ್ಟೋ ಅಷ್ಟೇ. ಹಿಂದುಸ್ಥಾನದಲ್ಲಿ ಬೇಸಾಯದ ಆಹಾರದ ಲೆಕ್ಕಗಳು ತೀರಾ ಕಚ್ಚಾ. ಆದರಿಂದ ಸರಿಯಾದ ಜ್ಞಾನ ಸಿಗದು, ನಿಜ. ಆದರೆ ಬೇರೆ ಅಂಕೆಗಳಿಲ್ಲದಾಗ ಸರಕಾರೀ ಅಂಕಿಗಳೇ ಗತಿ ತಾನೆ. ಡಾ. ರಾಧಾ ಕಮಲ ಮುಖರ್ಜಿ ಹಿರಿಯ ಅರ್ಥಶಾಸ್ತ್ರ ಪಂಡಿತರು. ಅವರು '೪೦ ಕೋಟಿಗೆ ಆಹಾರ ವ್ಯವಸ್ಥೆ' ಎಂಬ ಪುಸ್ತಕ ಬರೆದಾಗ ೧೯೩೫ರಲ್ಲಿ ಹಿಂದುಸ್ಥಾನದ ಎಲ್ಲ ಬಗೆಯ ಆಹಾರ ದಿನಸಿನ ಬೆಳೆಯೂ ಒಟ್ಟು ೨೮೦ ಲಕ್ಷ ಕೋಟಿ ಕ್ಯಾಲರಿ ಆಗುತ್ತದೆ ಎಂದು ಲೆಕ್ಕಹಾಕಿದಾರೆ. ಈ ಯುದ್ಧ ನಮ್ಮ ತಲೆಯ ಮೇಲೆ ಬಂದಿಳಿದಾಗಲೂ ಅಷ್ಟೇ ಇತ್ತು ಎನ್ನೋಣ. ಹಾಗಾದರೆ ಒಂದು ಸ್ಥೂಲವಾದ ಪಟ್ಟಿ ತಯಾರಾಗುತ್ತದೆ:

| | |
|---|---|
| ನಮಗೆ ಬೇಕಾದ್ದು | ೩೯೦ ಲಕ್ಷ ಕೋಟಿ |
| ನಾವು ಬೆಳೆದದ್ದು | ೨೮೦ ಲಕ್ಷ ಕೋಟಿ |
| ಕಡಮೆ ಬಿದ್ದದ್ದು | ೧೧೦ ಲಕ್ಷ ಕೋಟಿ |

ಎಂದರೆ, ೧೯೪೧ಕ್ಕೆ ಮೊದಲು ೧೧ ಕೋಟಿ ಭಾರತೀಯರಿಗೆ – ನಮ್ಮ ಜನ ಸಂಖ್ಯೆಯಲ್ಲಿ ೨೮%ಕ್ಕೆ—ಅನ್ನವಿರಲಿಲ್ಲ.

ನಾವು ಪ್ರತಿಯೊಬ್ಬರೂ ನಮಗೆ ಹೊಟ್ಟೆ ತುಂಬಾ ಅನ್ನ ಬೇಕೆಂದು ಹಟ ಹಿಡಿದಿದ್ದರೆ, ನಮ್ಮ ಅಣ್ಣತಮ್ಮಂದಿರು, ಅಕ್ಕತಂಗಿಯರು ೧೧ ಕೋಟಿ ಜನ ನಿರ್ನಾಮವಾಗಬೇಕಾಗಿತ್ತು. ಆದರೆ ನಾವೇನು ಅಂಥ ರಾಕ್ಷಸರೆ! ಎಲ್ಲೋ ಕೆಲವರು ಶ್ರೀಮಂತರನ್ನು ಬಿಟ್ಟರೆ ಉಳಿದವರು ನಾವೆಲ್ಲ, ಎಲ್ಲರೂ ಬದುಕಲೆಂದು ಕೊಂಚ ಕೊಂಚ ನಮ್ಮ ಪಾಲಿನಲ್ಲಿ ಕಡಮೆಮಾಡಿಕೊಂಡೆವು.

ಆರೋಗ್ಯವಾಗಿ ದೃಢವಾಗಿ ಇರಲು ಎಷ್ಟು ಬೇಕೋ ಅವರಲ್ಲಿ ೩।೫ ಭಾಗ ದಷ್ಟನ್ನು ಮಾತ್ರ ತಿಂದು ಬದುಕಿದೆವು.

## ೩

## ರೋಗರುಜಿನ, ನಿರ್ಬಲತೆ, ಪರಾಧೀನ

ಈ ಅಂಕೆಗಳು ತೋರಿಸುವ ಅನ್ನದ ಕೊರತೆಯ ದೀರ್ಘಕಾಲದ ಪರಿಣಾಮ ನಮ್ಮ ಜನರ ಮೈಯಲ್ಲಿ ಮನಸ್ಸಿನಲ್ಲಿ ಬಾಳಿನಲ್ಲಿ ಕಾಣುತ್ತಲೇ ಇದೆ. ಆಹಾರಲೋಪದಿಂದ, ಸಾಕಷ್ಟು ಪುಷ್ಟಿಯಿಲ್ಲದ್ದರಿಂದ ಬರುವ ಆಪ್ಟೋಮಲೇಷಿಯಾದಂಥ ರೋಗ ಎಷ್ಟೋ ಇವೆ. ಇದಲ್ಲದೆ ಜನರ ಸಾಧಾರಣ ಆರೋಗ್ಯದ ಮೇಲೂ ಇದರ ಪರಿಣಾಮ ವಿನಾಶಕರವಾಗಿದೆ. ಅರೆ ಹೊಟ್ಟೆಯಿಂದ ರೋಗವನ್ನು ತಡೆದುಕೊಳ್ಳುವ ಬಲ ಕುಗ್ಗುತ್ತದೆ; ಎದೆಯೊಡೆವಷ್ಟು ಪ್ರಾಣನಷ್ಟಕ್ಕೆ ಕಾರಣವಾಗುತ್ತದೆ. ಮರಣಸಂಖ್ಯೆಯಾಗಲಿ, ಶಿಶುಮರಣ ಸಂಖ್ಯೆಯಾಗಲಿ, ಆಯುಃಪ್ರಮಾಣವಾಗಲಿ, ದೌರ್ಭಾಗ್ಯದಲ್ಲಿ ಹಿಂದುಸ್ಥಾನ ಜಗತ್ತಿಗೇ ಮೊದಲು. ಕೆಳಗಿನ ಈ ಅಂಕೆಗಳನ್ನು ನೋಡಿ:

| | | | |
|---|---|---|---|
| ನಮ್ಮ ಮರಣಸಂಖ್ಯೆ | — | ಸಾವಿರಕ್ಕೆ | ೨೨.೪ |
| ಜಾವಾ | — | | ೧೮.೮ |
| ಜಪಾನ್ | — | | ೧೭.೦ |
| ಬ್ರಿಟನ್ | — | | ೧೩.೪ |
| ಅಮೆರಿಕಾ | — | | ೧೧.೨ |
| ನಮ್ಮ ಶಿಶುಮರಣ | — | ಸಾವಿರಕ್ಕೆ | ೧೬೨ |
| ಜಪಾನ್ | — | | ೧೦೬ |
| ಬ್ರಿಟನ್ | — | | ೫೮ |
| ಅಮೆರಿಕಾ | — | | ೫೪ |

ಭಾರತೀಯನಿಗೆ ಸರಾಸರಿ ಆಯುಃಪ್ರಮಾಣ ೨೭ ವರ್ಷ, ಜಪಾನೀಗೆ ೪೭, ಇಂಗ್ಲೀಷನಿಗೆ ಅಮೆರಿಕನಿಗೆ ೬೨, ಜರ್ಮನ್ ಸ್ವಿಸ್‌ರಿಗೆ ೬೩, ನ್ಯೂಜಿಲೆಂಡ್‌ನವನಿಗೆ ೬೭.

ಭಾರತೀಯ ಕೂಲಿಗಾರ ಬಲು ನಿಧಾನ, ಕೆಲಸದಲ್ಲಿ ಸಮರ್ಥನಲ್ಲ ಎಂದು ಬಂಡವಾಳಗಾರರು ಹೇಳುತ್ತಾರೆ. ಅದಕ್ಕೆ ಕಾರಣವಿಲ್ಲದಿಲ್ಲ. ಅಮೆರಿಕಾದಲ್ಲಿ ಒಬ್ಬ ಗಣಿ ಕೂಲಿಗಾರ ವರ್ಷಕ್ಕೆ ೮೫೯ ಟನ್ ಅದಿರು ತೆಗೆಯುತ್ತಾನೆ; ಇಂಗ್ಲೆಂಡಿನಲ್ಲಿ ೩೦೦ ಟನ್, ಜರ್ಮನಿಯಲ್ಲಿ ೭೪೩ ಟನ್; ಅದೇ ಭಾರತೀಯ ಕೂಲಿಗಾರ ತೆಗೆಯುವುದು ೮೦ ಟನ್ನು. ಆದರೆ ಹುಟ್ಟಿದಂದಿನಿಂದ ಅರೆಹೊಟ್ಟೆ ತಿಂದು ಬದುಕುವ ಈ ಬಡಪಾಯಿ ಇಷ್ಟು ಮಾಡುತ್ತಾನಲ್ಲ ಎಂಬುದೇ ಒಂದು ಅಚ್ಚರಿ.

ಅರೆಹೊಟ್ಟೆ, ಹಸಿವಿನಿಂದ ಆರೋಗ್ಯಹೀನತೆ, ಅಸಾಮರ್ಥ್ಯ-ಎರಡೇ ಅಲ್ಲ, ಮೂರನೆ ದುಷ್ಫಲವೂ ಉಂಟು. ರಾಜಕೀಯ ಪರಾಧೀನತೆ, ಹೊಟ್ಟೆಗಿಲ್ಲದೆ ಬಟ್ಟೆಯಿಲ್ಲದೆ, ಸಾಕಿದ ಕುನ್ನಿಯಂಥ ಹಿಂದುಸ್ಥಾನದ ಹಳ್ಳಿಯ ತರುಣನೊಬ್ಬನನ್ನು ಹಿಡಿದು ಸೈನ್ಯಕ್ಕೆ ಸೇರಿಸಿ, ಅವನಿಗೆ ಸಿಪಾಯಿ ಉಡುಪು ಕೊಡಿ; ಮೂರು ನಾಲ್ಕು ತಿಂಗಳು ಸರಿಯಾಗಿ ಊಟಹಾಕಿ; ಜಗತ್ತಿನ ವೀರಾಧಿವೀರರ ಸಾಲಿಗೆ ಸೇರುತ್ತಾನೋ ಇಲ್ಲವೋ ನೋಡಿ. ಮಾರ್ಕ್ಸ್‌ರ ಸಿದ್ಧಾಂತಗಳಲ್ಲಿ 'ಸಂಕಟಪರಂಪರಾ ತತ್ವ'ವೊಂದಿದೆ. ಹೊಟ್ಟೆಗಿಲ್ಲದಿದ್ದರೆ ವಿಪ್ಲವಕ್ಕೆ ಕ್ರಾಂತಿಗೆ ದಾರಿಯಾಗುತ್ತದೆಂದು ಅದರ ಅರ್ಥ. ಈಚೆಗೆ ಕೆಲವು ತಿಂಗಳಿಂದ ಬಂಗಾಳದಲ್ಲಿ ನಡೆದ ಸಂಗತಿಗಳು ಈ ಸಿದ್ಧಾಂತವನ್ನು ಕುಟ್ಟಿ ಧೂಳಿಗರಿಸಿವೆ. ರಚನಾತ್ಮಕ ಕಾರ್ಯವನ್ನು ಮಾಡಿ ಎಂದು ಮಹಾತ್ಮಾ ಗಾಂಧೀಜೀ ಇಷ್ಟು ವರ್ಷ ಹೇಳುತ್ತಿದ್ದುದೇ, ಎಷ್ಟೋ ವಿಷಯಗಳಲ್ಲಿದ್ದಂತೆ-ಸತ್ಯವೆಂದು ತೋರುತ್ತದೆ. ಮೊದಲು ನಮ್ಮ ರೈತನಿಗೆ ಒಂದು ಹಿಡಿ ಅನ್ನ ಹೆಚ್ಚಾಗಿ ಸಿಗಲಿ, ತೋಳಿಗೆ ಕೊಂಚ ಬಲ ಬರಲಿ; ಆಗ ತನ್ನ ದೇಶದ ಸ್ವಾತಂತ್ರ್ಯ, ತನ್ನ ಹಕ್ಕು ಎಂದಾನು. ಅಬ್ರಹಾಂ ಲಿಂಕನ್ 'ಅರೆವಾಸಿ ಸ್ವತಂತ್ರರು, ಅರೆವಾಸಿ ಗುಲಾಮರು ಆದರೆ ರಾಷ್ಟ್ರವಾದೀತೇ?' ಎಂದಿದ್ದ. ಅದನ್ನೇ ತಿರುಗಿಸಿ 'ಅರೆಹೊಟ್ಟೆ ತಿಂದು ದೇಶ ಸ್ವತಂತ್ರವಾಗಿದ್ದೀತೇ?' ಎನ್ನಬಹುದು.

---

೬

ಹಿಂದುಸ್ಥಾನದ ಸದಾಕಾಲದ ಈ ಆಹಾರ ಸಮಸ್ಯೆಯ ನಿವಾರಣೆಗಾಗಿ ಎಷ್ಟೋ ಉಪಾಯಗಳು ಸೂಚಿತವಾಗಿವೆ. ಎಲ್ಲ ಸೂಚನೆಗಳದೂ ಒಂದಲ್ಲ ಇನ್ನೊಂದು; ಅಂತೂ ಎರಡೇ ದಾರಿ. ದಿನೇದಿನೇ ಬೆಳೆಯುತ್ತಿರುವ ಭಾರತಸಂತಾನ ಒಂದು ಕಡೆ, ಆ ವೇಗಕ್ಕೆ ಸರಿಯಾಗಿ ಹೆಚ್ಚದೆ ಮೊದಲೇ ಅರೆಬರೆಯಾದ ಆಹಾರಸರಬರಾಯಿ ಒಂದು ಕಡೆ. ಈ ಲೆಕ್ಕ ಬಾಯಿಗೂಡಬೇಕಾದರೆ – ನಮ್ಮ ಜನಸಂಖ್ಯೆ ಬೆಳೆಯದ ಹಾಗೇನಾದರೂ ಮಾಡಬೇಕು: ಇಲ್ಲವೆ, ನಮ್ಮ ಆಹಾರದ ಬೆಳೆಯನ್ನಾದರೂ ಹೆಚ್ಚಿಸಬೇಕು; ಎರಡನ್ನೂ ಏಕಕಾಲದಲ್ಲಿ ಮಾಡಿದರೆ ಇನ್ನೂ ಉತ್ತಮ. ಇಲ್ಲೂ ಅಷ್ಟೆ, ಉಳಿದ ಸಂದರ್ಭಗಳಂತೆ ಸರಿಯಾದ ಲೆಕ್ಕ ಸಿಗುವುದಿಲ್ಲ. ಅನ್ನ – ಜನ; ಈ ಪೈಪೋಟಿಯಲ್ಲಿ ಅನ್ನವೇ ಪೂರಾ ಸೋತುಹೋಗಿದೆಯೆಂದು ರಾಧಾಕಮಲ ಮುಖರ್ಜಿಗಳು ಹೇಳಿದಾರೆ. ೧೯೧೦ – ೧೯೧೪ರ ಕಾಲದಲ್ಲಿ ಎರಡೂ ನೂರರ ಮನೆಯಲ್ಲೇ ಇದ್ದರೆ (ಅದು ಸರಾಸರಿ ಕಾಲ) ೧೯೩೭-೩೮ರಲ್ಲಿ ಅನ್ನದ ಸೂಚೀಸಂಖ್ಯೆ ೧೧೦ಕ್ಕೇ ನಿಂತರೆ ಜನದ ಸಂಖ್ಯೆ ೧೫೫ಕ್ಕೆ ಮುಟ್ಟಿತು ಎಂದಿದಾರೆ.

ಇದಕ್ಕೆ ವಿರುದ್ಧವಾಗಿ ಕೇಟ್ ಎಲ್. ಮಿಚೆಲ್, ತನ್ನ ಅಮೂಲ್ಯ ಪುಸ್ತಕ – 'ಭಾರತ ಅಮೆರಿಕದ ಕಣ್ಣಲ್ಲಿ' – ದಲ್ಲಿ ಬರೆದಿದಾಳೆ.

“೧೯೧೦ರಿಂದ ೧೯೩೦ರಲ್ಲಿ ಜನಸಂಖ್ಯೆ ನೂರಕ್ಕೆ ೧೭ರಂತೆ ಹೆಚ್ಚಾಯಿತು. ಆಹಾರದ ಬೆಳೆ ೩೦%ರಷ್ಟು ಹೆಚ್ಚಿತು. ಈಗ ಭಾರತದಲ್ಲಿ ಆಹಾರದ ಬೆಳೆ ಸ್ವಲ್ಪವೂ ಸಾಲದು. ನಿಜ. ಇದಕ್ಕೆ ಕಾರಣ, ಅವರ ಬೇಸಾಯದ ರೀತಿ; ಇರುವ ಸಂಪತ್ತಿಯನ್ನು ಬೆಳೆಸದಿರುವ ಲೋಪ; ಜನಸಂಖ್ಯೆ ಮಿತಿಮೀರಿ ಬೆಳೆದಿದೆಯೆಂಬುದು ಕಾರಣವಲ್ಲ. ತನ್ನಲ್ಲಿರುವ ಸಂಪತ್ತಿಯನ್ನು ಸರಿಯಾಗಿ ಬಳಸಿಕೊಂಡರೆ ಹಿಂದುಸ್ಥಾನ ಈಗಿರುವುದಕ್ಕಿಂತ ಎಷ್ಟೋ ಪಾಲು ಹೆಚ್ಚು ಜನರನ್ನು ಸಾಕಿ ಸಲಹಬಲ್ಲದು....ಹಿಂದುಸ್ಥಾನದ ಬಡತನಕ್ಕೆ ಅವರ ಜನಬಲದ ವೃದ್ಧಿಯ ವೇಗವಲ್ಲ ಕಾರಣ. ಭಾರತದ ಆರ್ಥಿಕಾಭಿವೃದ್ಧಿ ಮೊಟಕಾಗಿ ಹೋಗಿರುವುದೇ.”

ನಾವು ಸಂತಾನಶೂರರು, ನಿರಾತಂಕವಾಗಿ ನಿರಾಲೋಚನೆಯಿಂದ ಮಕ್ಕಳನ್ನು ಹೆರುತ್ತಿದ್ದೇವೆ ಎನ್ನುವವರುಂಟು. ಅಂಥವರಿಗೆ ಇಂಗ್ಲೆಂಡಿನಲ್ಲಿ, ವಿಲಾಯತಿ ಸೀಮೆಗಳಲ್ಲಿ ಬೆಳೆದಷ್ಟು ನಮ್ಮ ದೇಶದಲ್ಲಿ ಜನಸಂಖ್ಯೆ ಬೆಳೆದಿಲ್ಲ ವೆಂದು ಉತ್ತರಕೊಡಬಹುದು. ೧೮೭೦ರಿಂದ ೧೯೩೧ರೊಳಗೆ ಹಿಂದುಸ್ತಾನ ದಲ್ಲಿ ಜನಸಂಖ್ಯೆ ೩೩%ರಂತೆ ಹೆಚ್ಚಿತು. ಇಂಗ್ಲೆಂಡ್ ಮತ್ತು ವೇಲ್ಸಿನ ಜನಸಂಖ್ಯೆ ೫೪%ರಂತೆ ಹೆಚ್ಚಿತು. ಕಳೆದ ೫೦ ವರ್ಷಗಳಲ್ಲಿ ಬ್ರಿಟನ್ನಿನ ಜನಸಂಖ್ಯೆ ಬೆಳೆಯಲು ಬಲವಾದ ಕಾರಣ, ಅದಕ್ಕೊಂದು ಸಾಮ್ರಾಜ್ಯವಿತ್ತು; ಅಲ್ಲಿಂದ ಇಲ್ಲಿಂದ ಹೀರಿ ತಂದು ತನ್ನ ಮಕ್ಕಳನ್ನು ಪರಾವಲಂಬಿಗಳಾಗಿ ಬೆಳೆಸಬಹುದಿತ್ತು. ಹಿಂದುಸ್ಥಾನಕ್ಕೆ ವಸಾಹತು ಯಾವುದೂ ಇಲ್ಲ. ಎಂದಿ ಗಾದರೂ ವಸಾಹತು ಕಟ್ಟುವ ಬುದ್ಧಿ ಅದಕ್ಕೆ ಬರಲಿಕ್ಕಿಲ್ಲವೆಂದು ನನ್ನ ಆಸೆ.

ಅದು ಹೇಗಾದರೂ ಇರಲಿ ತನ್ನ ಜನರ ಹೊಟ್ಟೆಗೆ ಬೇಕಾದಷ್ಟು ಅನ್ನ ಬೆಳೆಸುವ ತನಕ ಹಿಂದುಸ್ಥಾನದಲ್ಲಿ ಸಂತಾನವೃದ್ಧಿಯಾಗುವುದು ಅನ್ಯಾಯ. ನಮ್ಮ ಕುಟುಂಬವನ್ನು ರಾಜಕೀಯವಾಗಿ, ಆರ್ಥಿಕವಾಗಿ ಓರಣಮಾಡಿಕೊಳ್ಳುವ ವರೆಗೆ ಹೀಗೆ ಮಕ್ಕಳನ್ನು ಹೆರುತ್ತಾ ಹೋಗಲು ನಮಗೆ ಅಧಿಕಾರವಿಲ್ಲ. ಆದ್ದರಿಂದ ಸಂತಾನನಿರೋಧದ ಪ್ರಚಾರ ನಮ್ಮ ದೇಶದಲ್ಲಿ ಅತ್ಯಗತ್ಯವೆನ್ನುತ್ತೇನೆ. ಅದರ ಪರಿಣಾಮ ಕೆಲವು ಕಾಲದಮೇಲೆ ಆದೀತು; ಕೂಡಲೆ ಆಗಲಿಕ್ಕಿಲ್ಲ. ಆದರೆ ಈ ಪ್ರಚಾರ ಈಗ ಅಗತ್ಯ.

ಈ ಲೆಕ್ಕವನ್ನು ಬಾಯಿಗೂಡಿಸಲು ಹೆಚ್ಚು ಆಹಾರ ಬೆಳೆಯುವುದೇ ಉತ್ತಮ ಮಾರ್ಗ. ಬ್ರಿಟಿಷ್ ಸರಕಾರದ 'ಹೆಚ್ಚು ಆಹಾರ ಬೆಳೆಯಿರಿ' ಚಳುವಳಿ ನಿಷ್ಪ್ರಯೋಜನವಾಗಿದೆ. ಆ ಸೂತ್ರವೇನೋ ಸರಿಯಾದದ್ದೇ. ೫೫ ಲಕ್ಷ ಎಕರೆ ಹತ್ತಿ ಬಿತ್ತುವುದನ್ನು ಬಿಡಿಸಿ ಜೋಳ ಮುಂತಾದವನ್ನು ಬಿತ್ತಿಸಿದಾರಂತೆ. ಆದರೆ ಪ್ರೊ. ವಿ. ಕೆ. ಆರ್. ವಿಜಯೇಂದ್ರರಾಯರ 'ಯುದ್ಧ - ಭಾರತೀಯ ಆರ್ಥಿಕ ಪರಿಸ್ಥಿತಿ'ಯಲ್ಲಿ ಹೇಳಿರುವ ಲೆಕ್ಕಗಳಿಂದ ಯುದ್ಧಕ್ಕೆ ಮೊದಲಿದ್ದ ನೆಲಕ್ಕಿಂತ ಹೆಚ್ಚು ನೆಲದಲ್ಲಿ ಈಗ ಧಾನ್ಯ ಬೆಳೆದಿಲ್ಲ ವೆಂದು ಗೊತ್ತಾಗುತ್ತದೆ. ಹಾಗಾದರೆ ಇದಕ್ಕೇನರ್ಥ? ಇದುವರೆಗೆ ಸಾಗು ವಳಿಯಾಗುತ್ತಿದ್ದ ಭೂಮಿಯಲ್ಲಿ, ಮುಟ್ಟು ಬೀಜ ಗೊಬ್ಬರ ಇಲ್ಲದೆ, ಬೆಳೆ ಮೊದಲಿಗಿಂತ ಕಡಿಮೆಯಾಗಿರಬೇಕು ತಾನೆ?

**ಬೆಳೆ – ಲಕ್ಷ ಟನ್ ಲೆಕ್ಕ**

| | ೧೯೩೯-೪೦ | ೧೯೪೦-೪೧ | ೧೯೪೧-೪೨ | ೧೯೪೨-೪೩ |
|---|---|---|---|---|
| ಅಕ್ಕಿ | ೨೮೫ | ೨೮೯ | ೨೫೮ | ೨೪೫ |
| **ಗೋಧಿ** | ೧೦೮ | ೧೦೦ | ೧೦೧ | ೧೦೯ |

ಇದೇ ಕಾಲದಲ್ಲಿ ಬ್ರಿಟನ್-ಬ್ಲಿಟ್ಜ್ ವಿಮಾನ ಧಾಳಿಗೆ ಗುರಿಯಾಗಿದ್ದ ಕಾಲ ಅದು – ತನ್ನ ಬೆಳೆಯನ್ನು ಉತ್ತಮ ರೀತಿಯಲ್ಲಿ ಹೆಚ್ಚಿಸಿಕೊಂಡಿತು. ಆಗಸ್ಟ್ ೧೯೩೯ರಲ್ಲಿ ಬ್ರಿಟನ್ ತನಗೆ ಬೇಕಾದ್ದರಲ್ಲಿ ೪೦%ರಷ್ಟನ್ನು ಮಾತ್ರ ಬೆಳೆದುಕೊಳ್ಳುತ್ತಿತ್ತು. ೧೯೪೨ರಲ್ಲಿ ೬೦%ರಷ್ಟು ಬೆಳೆದುಕೊಳ್ಳುತ್ತಿದೆ.

ನಿಜವಾದ 'ಹೆಚ್ಚು ಆಹಾರ ಬೆಳೆಯಿರಿ' ಚಳುವಳಿ ಎರಡು ಬಗೆಯಲ್ಲಿ ಕೆಲಸ ಮಾಡೀತು. ಒಂದು: ಸಾಗುವಳಿ ಭೂಮಿಯನ್ನು ಹೆಚ್ಚಿಸುವುದು. ಹಿಂದುಸ್ಥಾನದಲ್ಲಿ ೧೧ ಕೋಟಿ ಎಕರೆ ಸಾಗುವಳಿಗೆ ಯೋಗ್ಯವಾದ ಬಂಜರು ನೆಲ ಇದೆಯೆಂದು ಹೇಳುತ್ತಾರೆ. ಅದರಲ್ಲಿ ಯೋಗ್ಯವಾದದ್ದು ಸ್ವಲ್ಪವೇ ಇರಬಹುದು. ಎಷ್ಟೇ ಇರಲಿ ಅದನ್ನು ಸಾಗುವಳಿಗೆ ತರಬೇಕು. ಭೂಮಿಯನ್ನು ಬಂಜರು ಬಿಡುವ ಶ್ರೀಮಂತಿಕೆ ನಮಗಿಲ್ಲ. ಆದರೆ ಹೇಗಾದೀತು ಈ ಕೆಲಸ? ಅಲ್ಲಿ ಊರು ಕಟ್ಟಿ, ಸರಕಾರದ ವಿಪುಲ ಸಹಾಯದಿಂದ ನೆಲವನ್ನು ಹದಗೊಳಿಸುವಂತೆ ರೈತರನ್ನು ಪ್ರೋತ್ಸಾಹಿಸಬೇಕು. ಇದಕ್ಕಿಂತ ಪರಿಣಾಮಕಾರಿಯಾದ ವಿಶೇಷ ಫಲದಾಯಕವಾದ ದಾರಿ ನಮ್ಮ ಎಕರೆವಾರು ಬೆಳೆ ಹೆಚ್ಚಿಸುವುದು. ನಮ್ಮ ರೈತರು ಬುದ್ಧಿವಂತರು; ಕಷ್ಟಪಟ್ಟು ಕೆಲಸ ಮಾಡುತ್ತಾರೆ. ಆದರೂ ನಮ್ಮ ಭೂಮಿಯಲ್ಲಿ ಸರಿಯಾದ ಬೆಳೆ ಬರುತ್ತಿಲ್ಲ. ಜಪಾನಿನಲ್ಲಿ ನಮಗಿಂತ ೨ ಪಾಲು ಹೆಚ್ಚು ಬೆಳೆಯುತ್ತಾರೆ. ಇಂಗ್ಲೆಂಡಿನಲ್ಲಿ ೩ ಪಾಲು ಹೆಚ್ಚು. ಏಷ್ಯಾಖಂಡದಲ್ಲೂ ನಮಗಿಂತ ಹೆಚ್ಚು. ನಾವೇ ಎಲ್ಲರಿಗಿಂತ ಕನಿಷ್ಠ.

| | **ಹಿಂದುಸ್ಥಾನ** | **ಚೀನಾ** | **ಜಪಾನ್** |
|---|---|---|---|
| | | (೧ ಎಕರೆಗೆ ಕ್ವಿಂಟಾಲುಗಳು) | |
| **ಗೋಧಿ** | ೮.೧ | ೯.೭ | ೧೩.೭ |
| **ಅಕ್ಕಿ** | ೧೬.೫ | ೨೫.೬ | ೩೦.೬ |

| | ಹಿಂದುಸ್ಥಾನ | ಜಪಾನ |
|---|---|---|
| | (೧ ಎಕರೆಗೆ ಟನ್) | |
| ಕಬ್ಬು | ೧೦ | ೪೦ |

ಈ ನಿರರ್ಥಕತೆಯನ್ನು ಹೇಗೆ ನಿಲ್ಲಿಸಬೇಕೋ ಚರ್ಚಿಸಲು ಇದು ಸ್ಥಳವಲ್ಲ. ಇದಕ್ಕೆ ಹಲವಾರು ಕಾರಣಗಳಿವೆ; ಅಂತೆಯೇ ಹಲವಾರು ಉಪಾಯಗಳು ಇವೆ. ಹೊಸಕಾಲದ ಮುಟ್ಟು; ಉತ್ತಮತರದ ಬೀಜ; ಕೃತಕ ಗೊಬ್ಬರದ ಬಳಸಿಕೆಯಲ್ಲಿ ಧಾರಾಳ; ಇನ್ನೂ ಹೆಚ್ಚು ನೀರಾವರಿ; ಸುಲಭವಾದ ಬೇಸಾಯದ ಸಾಲ; ತೀರ ಚಿಕ್ಕ ಹೋಳಾಗಿರುವ ಹೊಲಗಳನ್ನು ಒಟ್ಟುಗೂಡಿಸುವ ಜಂಟಿ ಬೇಸಾಯ ಪದ್ಧತಿ; ಜಮೀನುದಾರಿ ಪದ್ಧತಿಯ ನಿರ್ಮೂಲ; ಗ್ರಾಮೋದ್ಯೋಗಗಳ ಬೆಳವಣಿಗೆ—ಇಂಥವು ಎಷ್ಟೋ ಸುಧಾರಣೆ ಅಗತ್ಯ. ಲಂಡನ್ನಿನ 'ಎಕಾನಮಿಸ್ಟ್' ಪತ್ರಿಕೆ ಕೂಡಾ ಒಪ್ಪಿಕೊಂಡಿರುವಂತೆ, ಈಗ ಬೇಸಾಯದ ಕ್ರಾಂತಿ ಇಲ್ಲದಿದ್ದರೆ ಹಿಂದುಸ್ಥಾನದ ಬೇಸಾಯ ಲಾಭಕರವೂ ಯೋಗ್ಯವೂ ಆದ ಕಸಬು ಆಗಲಾರದು; ಆಗುವ ಸಂಭವವಿಲ್ಲ.

ಬೇಸಾಯದ ತರುವಾಯ ಬರುವ ಮುಖ್ಯ ಕಸಬು ಪಶುಪಾಲನೆ. ಇಡೀ ಜಗತ್ತಿನ ೭೦ ಕೋಟಿ ದನದಲ್ಲಿ ನಮ್ಮಲ್ಲಿ ೨೦ ಕೋಟಿ ದನ ಇವೆ. ಇಬ್ಬಿಬ್ಬರಿಗೆ ಒಂದೊಂದು ದನ! ಜಗತ್ತಿನ ಗೋಧನದಲ್ಲಿ ೨೮. ೫% ಇದ್ದರೂ ನಮ್ಮ ದೇಶದಲ್ಲಿ ಕರೆವ ಹಾಲು ೧೭% ಮಾತ್ರ. ನಮ್ಮ ೨೦ ಕೋಟಿ ದನ ಕೊಡುವಷ್ಟು ಹಾಲನ್ನು ಜರ್ಮನಿಯಲ್ಲಿ ೨. ೯ ಕೋಟಿ ದನಗಳೇ ಕೊಡುತ್ತವೆ! ನಮ್ಮ ದನದಲ್ಲಿ ಅರ್ಧಕ್ಕರ್ಧ ವ್ಯರ್ಥ ಜಂತುಗಳು; ನಮ್ಮ ದನದ ಗೋಳು ನಮ್ಮ ಗೋಳಿಗಿಂತಲೂ ಕಷ್ಟಕರವಾಗಿದೆ.

೫

ಯುದ್ಧ ವಕ್ರಿಸಿದಾಗ ಇದ್ದಾಗ ಹಿನ್ನೆಲೆ ಇದು. ಬಡತನದಿಂದ ಬಾಗಿಹೋದ ಜನ; ಬೇನೆ ಸಾವುಗಳಿಗೆ ಬೇಗ ತುತ್ತಾಗುವ ಆರೋಗ್ಯ; ಅರೆಹೊಟ್ಟೆ ಹಿಟ್ಟು, ಅರೆ ಹೊಟ್ಟೆ ಮೇವು ಆದ ಜನ, ದನ; ಸಾವಕಾರರಿಗೆ ಅಡವು ಆದ ಹೊಲ ಮನೆ; ನಷ್ಟದ ಬೇಸಾಯ; ಇದು ಆ ಚಿತ್ರ. ಇದಕ್ಕೆ

ಉಪಾಯಗಳೂ ದೀರ್ಘಕಾಲ ಸಾಧನೆಯವು. ಅಷ್ಟರಲ್ಲಿ ಹಿಂದುಸ್ಥಾನಕ್ಕೆ ಯುದ್ಧ ಬಂತು.

ಪೂರ್ವ ಏಷ್ಯಾಕ್ಕೆ ಯುದ್ಧ ಬಂದದ್ದು ನಮ್ಮ ಆಹಾರ ಪರಿಸ್ಥಿತಿಯನ್ನು ಹಲವು ರೀತಿಯಲ್ಲಿ ತಲೆಕೆಳಕು ಮಾಡಿತು. ಮೊದಲನೆಯದು: ಬರ್ಮಾ, ತಾಯ್‌ಲೆಂಡ್, ಹಿಂದೀ ಚೀನಾಗಳಿಂದ ಅಕ್ಕಿ ಆಮದು ನಿಂತುಹೋಯಿತು. ಶೇಕಡಾವಾರು ಲೆಕ್ಕದಲ್ಲಿ ಇದೇನು ಹೆಚ್ಚಲ್ಲವಾಗಲಿ ಅಳತೆಯಲ್ಲಿ ಭಾರಿ ಮೊತ್ತವೇ. 25 ಲಕ್ಷ ಟನ್ ಅಕ್ಕಿ ಎಂದರೆ ೨೪ ಕೋಟಿ ಅಕ್ಕಿ ತಿನ್ನುವ ಭಾರತೀಯರಲ್ಲಿ ೧ ಕೋಟಿ ೨೦ ಲಕ್ಷ ಜನಕ್ಕೆ ಅನ್ನ.

ಎರಡನೆ ಆಪತ್ತು: ೧೯೪೦, ೧೯೪೧, ೧೯೪೨, ೧೯೪೩ರಲ್ಲಿ ಆರು ತಿಂಗಳ ವರೆಗೂ ಇರಾನ್, ಇರಾಕ್, ಮಧ್ಯ ಏಷ್ಯಾದ ದೇಶಗಳಿಗೆ ಇಲ್ಲಿಂದ ಧಾನ್ಯ-ಮುಖ್ಯವಾಗಿ ಗೋಧಿ-ಸಾಗಿಹೋಯಿತು. ಈ ರಫ್ತು ವ್ಯಾಪಾರ ನಡೆದದ್ದು ಬ್ರಿಟಿಷ್ ಸೇನೆಯ ದಾಕ್ಷಿಣ್ಯಗಳಿಗಾಗಿ. ಹಾಗೆ ಎಷ್ಟು ಧಾನ್ಯ ರಫ್ತಾಯಿತೋ ನಾವು ತಿಳಿಯಲು ಸಾಧ್ಯವಿಲ್ಲ; ತಿಳಿದುಕೊಳ್ಳಲು ಅವಕಾಶವಿಲ್ಲ.

ಮೂರನೆಯದು: ಹಳ್ಳಿಗಳಲ್ಲಿದ್ದ ಧಾನ್ಯವನ್ನು ಸೇನೆಗಾಗಿ ಹೊತ್ತುಕೊಂಡು ಹೋದದ್ದು. ಹಿಂದುಸ್ಥಾನಿ ಸಿಪಾಯಿಗಳ ವಿಷಯದಲ್ಲಿ, ಸಿಪಾಯಿಗಳಾಗದಿದ್ದರೆ ಮಾತ್ರ ಅವರ ಪಾಲಿನ ಅನ್ನ ಅವರು ತಿನ್ನುತ್ತಿರಲಿಲ್ಲವೆ ಎಂದು ಆಕ್ಷೇಪಿಸಬಹುದು! ಇದು ನಿಜವಾದರೂ ಪೂರ್ಣ ಸತ್ಯವಲ್ಲ. ಅಮೆರಿಕಾದಲ್ಲಿ ಸಾಮಾನ್ಯನಿಗೆ ೩೫೦೦ ಕ್ಯಾಲರಿ ಆದರೆ, ಸಿಪಾಯಿಗೆ ೪೫೦೦ ಕ್ಯಾಲರಿ. ಹಿಂದುಸ್ಥಾನದಲ್ಲಿ ಈ ವ್ಯತ್ಯಾಸ ಇನ್ನೂ ಹೆಚ್ಚಾಗಿರುತ್ತದೆ. ಇದರ ಜೊತೆಗೆ ಮೊನ್ನೆ ಚರ್ಚಿಲ್ ಹೇಳಲಿಲ್ಲವೆ-ಬ್ರಿಟಿಷ್ ಸಂಬಂಧವಾದಾಗಿನಿಂದ ಹಿಂದೆ ಎಂದೂ ಇಲ್ಲದಷ್ಟು ಬಿಳಿ ಸಿಪಾಯಿಗಳು ಈಗ ಹಿಂದುಸ್ಥಾನದಲ್ಲಿದಾರೆ ಎಂಬುದನ್ನೂ ಸೇರಿಸಿ. ಅಲ್ಲಿಂದೀಚೆಗೆ ಅಮೆರಿಕಾ ಸಿಪಾಯಿಗಳೂ ವಿಶೇಷವಾಗಿ ಬಂದಿದಾರೆ. ಇವರ ಜೊತೆಗೆ ಇಟಲಿಯ, ಉಳಿದ ದೇಶದ ಸೆರೆಯಾಳುಗಳನ್ನು ಪರದೇಶಗಳಿಂದ ಓಡಿಬಂದವರನ್ನೂ ಲೆಕ್ಕ ಹಿಡಿಯಿರಿ. ಈ ಮಣ್ಣಿನಲ್ಲಿ ಹುಟ್ಟಿ ಬೆಳೆದ, ಭಾರತ ಸಂತಾನಕ್ಕಿಂತ ಇದರಲ್ಲಿ ಪ್ರತಿಯೊಬ್ಬನಿಗೂ ಹೆಚ್ಚು ಅನ್ನ ಸಿಗುತ್ತಿದೆ. ಈ ಆಹಾರಕ್ಕೆ ಬ್ರಿಟಿಷ್ ಸರಕಾರ ಬೆಲೆ ಕೊಡು

ತ್ತಿದೆ ಎಂದಾರು. ಇರಬಹುದು. ಮುಷ್ಟಿ ಕೊಟ್ಟರೆ ತಾನೆ ಅದು ಯಾರ ಅನ್ನ? ನಮ್ಮ ಅನ್ನ. ಅದನ್ನು ತೆಗೆದುಕೊಂಡು ಹೋದರೆ ಅದರ ಬದಲು ಬೇರೇನೂ ಅನ್ನ ಕೊಡಬೇಡವೆ? ಏನೂ ಕೊಟ್ಟಿಲ್ಲ.

ಇವೆಲ್ಲ ಕಾರಣಗಳಿಂದ ನಮ್ಮ ದೇಶಕ್ಕೆ ೫%ರಷ್ಟು ಅನ್ನ ಕಡಮೆ ಯಾಯಿತೆಂದು ಅರ್ಥಶಾಸ್ತ್ರಿಗಳು ಹೇಳಿದಾರೆ. ಐದೇಯೋ ಇನ್ನೂ ಹೆಚ್ಚೋ ಯೋ? ಕಲ್ಲು ಹೊರುವವನ ಸೊಂಟ ಮುರಿವುದು ಮೊದಲಿನ ದೊಡ್ಡ ಕಲ್ಲಿನಿಂದಲ್ಲ, ಕೊಟ್ಟ ಕೊನೆಯ ಸಣ್ಣ ಕಲ್ಲಿಗೆ.

ಈ ದೇಶ ಬಹುಕಾಲದಿಂದ ಮೌನವಾಗಿ ಎಷ್ಟೋ ಸಂಕಟ ಅನುಭವಿ ಸುತ್ತಿದೆ. ಇನ್ನೂ ಒಂದು ಸಂಕಟ ಅನುಭವಿಸುವುದು ಅದಕ್ಕೆ ಅಸಾಧ್ಯವೇ ನಿರಲಿಲ್ಲ. ಆದರೆ ಅದರ ಸೊಂಟ ಮುರಿದದ್ದೇ ಬೇರೆ—ಇದುವರೆಗೆ ಹೇಳದ ಮತ್ತೊಂದು - ಕಾರಣದಿಂದ; ಅದು ಹಣದ ಹಿಗ್ಗು (Currency Inflation)·

---

೬

## ಅನ್ನ; ಅರ್ಥ

ಮೊನ್ನೆ ಮೊನ್ನೆ ಕೇಂದ್ರ ಶಾಸನಸಭೆಯ ಚರ್ಚೆಯಲ್ಲಿ ಭಾರತ ಸರ ಕಾರದ ಆರ್ಥಿಕ ಸಚಿವ, ಸರ್ ಜೆರಿಮಿ ರೆಯಿಸ್‌ಮನ್ ಅನ್ನ-ಅರ್ಥ ಎರಡೂ ಒಂದೇ ಸಮಸ್ಯೆ ಎಂದರು. ರೆಯಿಸ್‌ಮನ್ ತಿಳಿದುದಕ್ಕಿಂತಲೂ ಹೆಚ್ಚು ಸತ್ಯ ಆ ಮಾತು.

ಯುದ್ಧ ಪ್ರಾರಂಭವಾದಾಗ ಈ ಯುದ್ಧದ ವೆಚ್ಚವನ್ನು ಹಿಂದು ಸ್ಥಾನಕ್ಕೆ ಸಂಬಂಧಿಸಿದಂತೆ-ಭರಿಸಲು ಸರಕಾರಕ್ಕೆ ಮೂರು ದಾರಿಯಿದ್ದವು. ತಮ್ಮ ಯುದ್ಧದ ಖರ್ಚನ್ನು ಬಹಿರಂಗವಾಗಿಯೇ ಭಾರತೀಯರಿಂದ ತೆರಿಗೆ ಹಾಕಿ ವಸೂಲು ಮಾಡುವುದು; ಆದಾಯ ತೆರಿಗೆಯನ್ನು ಹೆಚ್ಚಿಸಿ ಹೊಸ ತೆರಿಗೆಗಳನ್ನು ಹಾಕುವುದು. ಆದರೆ ದೇಶಕ್ಕೆ ಬೇಡದ ಈ ಯುದ್ಧಕ್ಕಾಗಿ ತೆರಿಗೆ ಹಾಕಿದ್ದರೆ ಅದು ರಾಜಕೀಯ ಕೌಶಲ್ಯವಾಗುತ್ತಿರಲಿಲ್ಲ. ಸಾಲದ್ದಕ್ಕೆ ಹಿಂದುಸ್ಥಾನಕ್ಕೆ ಹೊಸ ತೆರಿಗೆ ಕೊಡುವ ಶಕ್ತಿಯೂ ಇರಲಿಲ್ಲ.

ಎರಡನೆ ದಾರಿ: ಈ ಯುದ್ಧಕ್ಕೆ ಹಿಂದುಸ್ಥಾನದಿಂದ ಒಂದು ಕಾಸೂ ತೆಗೆದುಕೊಳ್ಳದಿರುವುದು. ಆಗ ಹಿಂದುಸ್ಥಾನ ಕೊಟ್ಟ ಸಾಮಾನಿಗೆ, ಮಾಡಿದ ಕೆಲಸಕ್ಕೆ ಬ್ರಿಟನ್ ಹಣ ಕೊಡಬೇಕಾಗುತ್ತಿತ್ತು. ತುರ್ಕಿಯೊಡನೆ ಬ್ರಿಟನ್ನು, ಸ್ವೀಡನ್ ಸ್ವಿಟ್ಜರ್ಲೆಂಡಿನೊಂದಿಗೆ ಜರ್ಮನಿ ಮಾಡಿದ ಹಾಗೆ. ಹಾಗೆ ನ್ಯಾಯವಾಗಿ ವ್ಯವಹರಿಸಲು ಎಷ್ಟೋ ದಾರಿಯಿದ್ದವು. ಹಿಂದುಸ್ಥಾನಕ್ಕೆ ಪಕ್ಕಾ ದಿನಸನ್ನೂ ಯಂತ್ರಸಾಮಗ್ರಿಯನ್ನೂ ಕೊಡಬಹುದಿತ್ತು. ಅಥವಾ ಬ್ರಿಟನ್ನು ನಮಗೆ ಬಂಗಾರವನ್ನು ಕೊಡಬಹುದಾಗಿತ್ತು. ಹಿಂದುಸ್ಥಾನದಲ್ಲಿರುವ ಬ್ರಿಟಿಷ್ ಬಂಡವಾಳವನ್ನು ಹಿಂದುಸ್ಥಾನದ ಜನರ ಹೆಸರಿಗೆ ಬದಲಿಸಬಹುದಾಗಿತ್ತು. ಭಾರತೀಯರು ನಿಜವಾಗಿಯೂ ಉಳಿತಾಯ ಮಾಡಿದ ಹಣವನ್ನು ಸಾಲವಾಗಿ ಪಡೆಯಬಹುದಾಗಿತ್ತು. ಬ್ರಿಟನ್ನಿಗೆ ಭಾರತದ ಬಗ್ಗೆ ಇರುವ ಅತಿ ವಿಸ್ತಾರವಾದ ಗುರುತರ ಜವಾಬದಾರಿಯನ್ನು ನೋಡಿದರೆ, ಈ ನಾಲ್ಕು ದಾರಿಯನ್ನೂ ತುಳಿಯಬಹುದಾಗಿತ್ತು, ಎಲ್ಲವೂ ಅಗತ್ಯವಾಗುತ್ತಿದ್ದವೋ ಏನೋ. ಎರಡೂ ಸ್ವತಂತ್ರ ರಾಷ್ಟ್ರವಾಗಿದ್ದರೆ ಹೀಗೇ ಆಗುತ್ತಿತ್ತು. ಆದರೆ ಬ್ರಿಟಿಷರ ಭಾರತೇತಿಹಾಸದಲ್ಲಿ ಅಂಥ ವರ್ಣನೆ ಅತ್ಯಂತ ಅಸಂಭವ.

ಆದರೆ ಬ್ರಿಟಿಷರು ಮೂರನೆ ದಾರಿಯೊಂದನ್ನು ತುಳಿದರು. ಹಿಂದುಸ್ಥಾನಕ್ಕೆ ಹಣ ಕೊಟ್ಟಂತೆ ಮಾಡುವುದು; ಆದರೆ ಸದ್ಯ ಯುದ್ಧ ಮುಗಿವ ತನಕ ಏನನ್ನೂ ಕೈಯಿಂದ ಬಿಡದಿರುವುದು. ಭಾರತ ಸಂರಕ್ಷಣೆಯ ವೆಚ್ಚ ಬೇರೆ, ಸಾಮ್ರಾಜ್ಯ ರಕ್ಷಣೆಯ ಖರ್ಚು ಬೇರೆ, ಹೀಗೆ ಇಬ್ಭಾಗ ಮಾಡಿದರು. ತೆರಿಗೆ ಹಾಕಿ, ಸಾಲ ತೆಗೆದು ಭಾರತ ಸಂರಕ್ಷಣೆಯ ವೆಚ್ಚವನ್ನು ಭಾರತ ಸರಕಾರ ವಹಿಸಿಕೊಂಡಿದೆ. ಉಳಿದ ಖರ್ಚಿಗಾಗಿ—ಎಂದರೆ ಬ್ರಿಟಿಷ್ ಸರಕಾರ ನಮ್ಮಿಂದ ಕೊಂಡ ಸಾಮಾನಿನ ಬೆಲೆ ಬೇರೆ ಬಾಬುಗಳಲ್ಲಿ ನಮಗೆ ಅವರಿಂದ ಸಲ್ಲಬೇಕಾದ ಹಣಕ್ಕಾಗಿ—ಲಂಡನ್ನಿನಲ್ಲಿ ನಮ್ಮ ಹೆಸರಿನಲ್ಲಿ ಲೆಕ್ಕ ಜಮಾ ಹಿಡಿಯಲಾಗಿದೆ. ಯುದ್ಧ ಮುಗಿದ ಮೇಲೇ ಈ ಹಣ ನಮಗೆ ಸಲ್ಲಬೇಕಾದರೆ; ಈ ಮುಂದಿನ ತಾರೀಖು ಹಾಕಿದ ಚೆಕ್ಕು ಮುರಿಸಬೇಕಾದರೆ. ಲಂಡನ್ನಿನ ಖಾತೆಯ ಈ ಲೆಕ್ಕದ ಆಧಾರದ ಮೇಲೆ ಇಲ್ಲಿ ಲೆಕ್ಕವೇ ಇಲ್ಲದಷ್ಟು ಕಾಗದದ ನಾಣ್ಯವನ್ನು ಚಲಾಯಿಸುತ್ತಿದಾರೆ. ನೋಟುಗಳು ಮಿತಿಯಿಲ್ಲದೆ ಓಡಾಡುತ್ತಿವೆ. ಹಣ ಭಯಾನಕವಾಗಿ ಹಿಗ್ಗಿಹೋಗಿದೆ. ಅನ್ನಕ್ಕೂ ಅರ್ಥಕ್ಕೂ

ಇರುವ ಸಂಬಂಧ ಇದು. ಹೀಗೆ ನೋಟು ಅಚ್ಚಿಸಿ ಯುದ್ಧದ ಖರ್ಚನ್ನು ವಹಿಸಿದರೆ ಏನು ಪರಿಣಾಮವಾದೀತೆಂಬುದು ಎಲ್ಲ ಅರ್ಥಶಾಸ್ತ್ರಾಭ್ಯಾಸಿಗಳಿಗೂ ಗೊತ್ತು. ಭವಿಷ್ಯ ಬೇಕಾದವರೂ ಹೇಳಬಹುತ್ತಿದ್ದರು. ಸಾಮಾನ್ಯ ಪ್ರಮಾಣದ ಸಿದ್ಧಾಂತವೇ ಒಂದಿದೆ. ದೇಶದಲ್ಲಿ ಸಾಮಾನು ಹೆಚ್ಚದೆ ಬರೀ ಹಣ ಹೆಚ್ಚಿದರೆ, ಸಾಮಾನಿನ ಬೆಲೆ ಏರಿ ಹಣದ ಬೆಲೆ ಕಡಮೆಯಾಗುತ್ತದೆ. ಹಣ ಅಗ್ಗವಾಗಿ ಸಾಮಾನು ತುಟ್ಟಿಯಾಗುತ್ತದೆ. ಕಳೆದ ನಾಲ್ಕು ವರ್ಷದಲ್ಲಿ ಹೀಗೇ ನಡೆದಿದೆ. ೧೯೩೯ರ ಆಗಸ್ಟಿನಲ್ಲಿ ಯುದ್ಧ ಪ್ರಾರಂಭವಾದಾಗ ಹಿಂದುಸ್ಥಾನದಲ್ಲಿ ೧೭೦ ಕೋಟಿ ರೂಪಾಯಿ ನೋಟು ಇದ್ದವು. ಆಗ ಬೊಂಬಾಯಿ ಜೀವನ ಸೂಚೀ ಸಂಖ್ಯೆ ೧೮೦ ಎನ್ನೋಣ. ೧೯೪೩ ಅಕ್ಟೋಬರಲ್ಲಿ ೭೭೪ ಕೋಟಿ ರೂಪಾಯಿ ನೋಟು ಚಲಾವಣೆಯಲ್ಲಿದ್ದುವು; ೬೦೪ ಕೋಟಿ ರೂಪಾಯಿ ಮೊದಲಿಗಿಂತ ಹೆಚ್ಚು. ಅದೇ ರೀತಿ ಬೊಂಬಾಯಿ ಜೀವನ ಸೂಚೀ ಸಂಖ್ಯೆ ೨೩೪ಕ್ಕೆ ಏರಿತ್ತು.

ಹೀಗೆಂದರೇನು ಗೊತ್ತೆ? ನಿಮ್ಮ ಜೇಬಿನಲ್ಲಿ, ನನ್ನ ಜೇಬಿನಲ್ಲಿ ಇರುವ ರೂಪಾಯಿನ ಬೆಲೆ ಹಿಂದಿನ ಆರಾಣೆ ಎಂಟು ಕಾಸು ಮಾತ್ರ. ಹಾಗಾದರೆ ಮಿಕ್ಕ ೯ ಆಣೆ ೪ ಕಾಸು ಏನಾಯಿತು ಎಂದು ನೀವು ಕೇಳಬಹುದು. ಉತ್ತರ ಗೊತ್ತೆ? ಯುದ್ಧದ ಖರ್ಚಿಗಾಗಿ, ಈ ದೇಶದಿಂದ ಯುದ್ಧ ಪ್ರಾರಂಭವಾದ ಮೇಲೆ ಸಾಗಿಸಿದ ಸಾಮಾನು ಕೊಳ್ಳಲು ಖರ್ಚಾಯಿತು. ಇದು ಒಂದು ರೀತಿಯ ಪ್ರಚ್ಛನ್ನ ತೆರಿಗೆ, ಬೇರೆ ವೇಷದ ಸುಂಕ. ಅದೂ ಬಡವರನ್ನು ಮತ್ತಿಷ್ಟು ಬಡವರಾಗಿಸಿ ಹಣವಂತರನ್ನು ಇನ್ನೂ ಹಣವಂತರಾಗಿ ಮಾಡುವ ಅನ್ಯಾಯದ ತೆರಿಗೆ.

ಇದರಿಂದ ಆಹಾರ ಪರಿಸ್ಥಿತಿಯ ಮೇಲೆ ಆಗಿರುವ ಪರಿಣಾಮ ಸುಲಭವಾಗಿಯೆ ಅರ್ಥವಾಗುತ್ತದೆ. ಹೊಲ ಮನೆಯಿಲ್ಲದ ಒಳನಾಡಿನ ಬೇಸಾಯದ ಕೂಲಿಗಾರನಿಗೆ ಇಷ್ಟು ದಿನ ತಾನು ಗಳಿಸುತ್ತಿದ್ದ ೪ ಆಣೆ, ೮ ಆಣೆ, ೧೨ ಆಣೆ ದಿನಗೂಲಿಯಲ್ಲಿ ಮೊದಲಿನ ಹಾಗೆ ಸಾಕಷ್ಟು ಅಕ್ಕಿ ಸಿಗದು. ೧೯೪೩ ನವಂಬರ್ ೧೬ರಲ್ಲಿ ಟೈಮ್ಸ್ ಆಫ್ ಇಂಡಿಯ ಸುದ್ದಿಗಾರ ಹೀಗೆ ಬರೆದಿದಾನೆ:

"ರೂಪಾಯಿಗೆ ೪–೫ ಮಣದಂತೆ ಅವನ ಕೂಲಿ ದರ ಏರ್ಪಟ್ಟಿತ್ತು;

ಈಗ ಮಣಕ್ಕೆ ೬೦ ರೂಪಾಯಿ. ಹೋದ ವರ್ಷ ಸುಗ್ಗಿಯ ದರ ಮಣಕ್ಕೆ ೧೫೦ ರೂಪಾಯಿ ಆಗಿತ್ತು.''

ಅಂತೆಯೆ ಕಳೆದ ಕೆಲವು ತಿಂಗಳಲ್ಲಿ ಕಲಕತ್ತೆಗೆ ಅನಾಥರು, ನಿರ್ಗತಿಕರು ಹೊಳೆಯಂತೆ ಹರಿದು ಬಂದುದು. ಅಂತೇ ಮುಂದಿನ ಕೆಲವು ತಿಂಗಳಲ್ಲಿ ಬೊಂಬಾಯಿಗೆ ಅಕ್ಕಪಕ್ಕದ ಜಿಲ್ಲೆಗಳಿಂದ ನಿರ್ಗತಿಕರು ಹರಿದು ಬರುವ ಸಂಭವ ಇರುವುದು.

ಬೆಂಗಳೂರಲ್ಲೂ ಅದೇ ಗತಿ.

ತನ್ನ ಹೊಲ ತಾ ಮಾಡಿಕೊಳ್ಳುವ ಬೇಸಾಯಗಾರನಿಗೆ ಈ ಅರ್ಥ ನಷ್ಟದ ಪೆಟ್ಟು ಹೇಗಿದೆ ಗೊತ್ತೆ ? ಪದಾರ್ಥಗಳ ಧಾರಣೆ ಏರಿದ್ದರಿಂದ ಅವನಿಗೆ ಎರಡು ಕಾಸು ಹೆಚ್ಚು ಸಂಪಾದನೆಯಿದ್ದರೂ—ಮಿಕ್ಕದ್ದೆಲ್ಲ ದಲಾಳಿಗಳ ಪಾಲೇ–ತಾನು ಪೇಟೆಯಲ್ಲಿ ಕೊಳ್ಳುವ ಸಾಮಾನಿನ ತುಟ್ಟಿ ಧಾರಣೆಯನ್ನೆಲ್ಲ ಅವನೇ ಹೊರಬೇಕು. ಕೆಲವು ಪದಾರ್ಥವಂತೂ ಸಿಗಲೇ ಸಿಗದು. ಮೊದಲೇ ಅರ್ಥಬಲ–ಕೊಳ್ಳುವ ಶಕ್ತಿ–ಕುಗ್ಗಿದ ಅವನನ್ನು ಮತ್ತಷ್ಟು ಮುರಿಯಲು ಈ 'ಮಿಗಿಸಿರಿ, ಸಾಲ ಕೊಡಿ' ಚಳುವಳಿ ಬೇರೆ. ಈ ಸಾಲ ಕೊಟ್ಟವರೆಲ್ಲ ಸ್ವಬುದ್ಧಿಯಿಂದ ತಾವಾಗಿ ಕೊಟ್ಟರೆಂದು ಹೇಳುತ್ತಾರಾಗಲಿ, ಇದನ್ನು ವಸೂಲು ಮಾಡುವ ರೀತಿನೀತಿಗಳು ಮಾತ್ರ ತುಂಬಾ ಅನುಮಾನಾಸ್ಪದವಾಗಿವೆ.

ಮೊದಲು ಭಾರತ ಸರಕಾರ ೧೦೦ ಕೋಟಿ ರೂಪಾಯಿ ಸಾಲ ವಸೂಲು ಮಾಡುವ ಹಂಚಿಕೆಗಾಗಿ ದಿಲ್ಲಿಯಿಂದ ಸುದ್ದಿ ಹಾರಿಸುತ್ತದೆ. ಆಮೇಲೆ ಸಂಯುಕ್ತ ಪ್ರಾಂತದಿಂದ ಪ್ರತಿ ಪ್ರಾಂತವೂ ೭ ಕೋಟಿ ವಸೂಲು ಮಾಡಬೇಕೆಂದು ಸುದ್ದಿ. ತರುವಾಯ ಮದರಾಸಿನ ಒಂದು ಜಿಲ್ಲೆಯಲ್ಲಿ ಜಿಲ್ಲಾಧಿಕಾರಿ ತಾಲ್ಲೂಕುವಾರು ಜಿಲ್ಲೆಯ ಪಾಲನ್ನು ಹಂಚಿಹಾಕಿದನೆಂಬ ವರದಿ ಬರುತ್ತದೆ. ಈ ಕಥೆ ಹೀಗೇ ಮುಂದೆ ಸಾಗುತ್ತದೆ. ರೈತನಿಗೆ ಅವನಾಗಿ ಕೊಡುವ ಈ ಸಾಲದ ಪಾಲು ಇಷ್ಟು ಎಂದು ನಿರ್ಧರವಾಗಿ ಹೇಳಲ್ಪಡುತ್ತದೆ. ಇವರ ಸ್ವಬುದ್ಧಿ, ಸ್ವೇಚ್ಛೆಗೆ ಬೇರೆ ವ್ಯಾಖ್ಯಾನವೇಕೆ ? ಕೆಲವು ಕಡೆ ಈ ಸಾಲ ವಸೂಲು ಮಾಡಲು ಬಲಾತ್ಕಾರವನ್ನು ಪಯೋಗಿಸಿದರೆಂದು ಪತ್ರಿಕೆಗಳಲ್ಲಿ ಸುದ್ದಿ ಬಂದಿರುವುದು ಆಶ್ಚರಿಯೇನಲ್ಲ.

ಈ 'ಕುಗ್ಗಿಸಿ, ಸಾಲ ಕೊಡಿ' ಚಳುವಳಿ ಹಣದ ಹಿಗ್ಗುವಿಕೆಗೆ ಒಳ್ಳೆಯದು, ಅದನ್ನು ಪ್ರೋತ್ಸಾಹಿಸಬೇಕು ಎನ್ನುತ್ತಾರೆ. ಇದರಿಂದ ಚಲಾವಣೆಯಲ್ಲಿರುವ ನಾಣ್ಯ ಕೊಂಚ ಮಟ್ಟಿಗೆ ಹಿಂದಕ್ಕೆ ಬಂದಂತಾಗಿ ಹಣ ಅಗ್ಗವಾಗುವುದಕ್ಕೆ ಸ್ವಲ್ಪಮಟ್ಟಿಗೆ ತಡೆಯಾದರೂ, ಮೊದಲೇ ಕುಗ್ಗಿದ ಕೊಳ್ಳುವ - ಶಕ್ತಿಯನ್ನು ಮತ್ತಷ್ಟು ಕುಗ್ಗಿಸಿ, ಆತ್ಮವಿಶ್ವಾಸವನ್ನು ತಗ್ಗಿಸಿ, ರೈತನಿಗೆ ತನ್ನ ಬೆಳೆಯನ್ನು ಮಾರಲು ಮನಸ್ಸಿಲ್ಲದಂತೆ ಮಾಡುತ್ತದೆ. ಆದ್ದರಿಂದ ಈ ಚಳುವಳಿಯ ಪರಿಣಾಮ ಅಗ್ಗದ ರೂಪಾಯಿಗೆ ಮದ್ದಲ್ಲ, ಅದನ್ನು ಮತ್ತಷ್ಟು ಹಿಗ್ಗಿಸುವ ದಾರಿ.

ನಾವೇ ಬೇಸಾಯಗಾರರೆಂದುಕೊಳ್ಳೋಣ. ನೀನೇ ರೈತನಾಗಿ ನೀ ಬೆಳೆದ ಕಾಳಿಗೆ ಬದಲು ಶೇ ೬೦ರಷ್ಟು ಬೆಲೆ ತಗ್ಗಿದ ನೋಟುಗಳನ್ನು ನಿನಗೆ ಕೊಟ್ಟರೆ; ಆ ನೋಟುಗಳಲ್ಲೂ ಕೆಲವನ್ನು ಮತ್ತೆ ಈ ಸಾಲದ ಚಳುವಳಿಗೆ ಕೊಂಡೊಯ್ದರೆ; ಮಿಕ್ಕವನ್ನು ಕೊಂಡು ಸಂತೆಗೆ ಹೋದಾಗ ಅದಕ್ಕೆ ಸೀಮೆಯೆಣ್ಣೆಯಾಗಲಿ ಕಬ್ಬಿಣದ ಮುಟ್ಟುಗಲಿ ಗೊಬ್ಬರವಾಗಲಿ ಬಟ್ಟೆಯಾಗಲಿ ನಿನಗೆ ಬೇಕಾದ್ದು ಒಂದೂ ಸಿಗದೆ ಹೋದರೆ, ನಿನ್ನ ಹೊಲದ ಕಾಳನ್ನು ನೀನು ಮಾರುತ್ತೀಯಾ? ಅದರ ಬದಲು ಮನೆಮಕ್ಕಳಿಗೆ ಹೊಟ್ಟೆ ತುಂಬ ಅನ್ನ ಇಡೋಣ, ಇಲ್ಲದೆ, ಗಾಳಿ ಕಾಲಕ್ಕಿರಲಿ ಅನಿಸದೆ? ಇದನ್ನು 'ದಾಸ್ತಾನು' ಎಂದರೆ ಸಾಧುವಾದ ನಾಯಿಗೆ ಹುಚ್ಚು ನಾಯಿ ಎಂದು ಹೆಸರಿಟ್ಟು ಕೊಂದು ಹಾಕಿದ ಹಾಗೆ.

ಈ ಕೆಲಸಕ್ಕೆ ಬಾರದ ನೋಟುಗಳಿಗೆ ಕಾಳು ಮಾರಬೇಡಿ ಎಂದು ಯಾರೋ ಕೆಲವರು ದೇಶದಲ್ಲಿ ರೈತರಿಗೆ ಹೇಳುತ್ತಿದ್ದಾರೆ; ಅವರೇ ಈ ಆಹಾರಾಭಾವಕ್ಕೆ ಕಾರಣ ಎಂದು ಸರಬರಾಯಿ ಸಚಿವರು ದಿಲ್ಲಿ ಶಾಸನಸಭೆಯಲ್ಲಿ ಹೇಳಿದರು. ನಿಜವಾಗಿಯೂ ಈ ಅಭಾವಕ್ಕೆ ಕಾರಣರಾದವರನ್ನು ಮರೆಮಾಚಲು ಸಚಿವರು ಮಾಡಿದ ಯುಕ್ತಿ ಇದು. ಯಾರಾದರೂ ಹಾಗೆ ಪ್ರಚಾರ ಮಾಡಿದರೋ ಇಲ್ಲವೋ. ಒಂದು ವೇಳೆ ಮಾಡಿದ್ದರೆ ಜನರಿಗೆ ಉಪಕಾರ ಮಾಡಿದರೆನ್ನಬೇಕು. ಸಚಿವರು ಖಂಡಿಸಿದ ಮನೋವೃತ್ತಿಯನ್ನು ಗ್ರೆಗರಿ ಸಮಿತಿಯವರ ಎತ್ತಿ ಹಿಡಿದಿದ್ದಾರೆ. ಆ ವರದಿಯಲ್ಲಿ :

"ರೈತನಿಗೆ ಬೇಕಾದ ಸಾಮಗ್ರಿಯ ಅಭಾವದಿಂದ ಅವನ ಬೇಸಾಯಕ್ಕೇ ಪೆಟ್ಟು ತಾಕದಿದ್ದರೂ ತನ್ನ ಬೆಳೆಯನ್ನು ಮಾರುವ ಮನಸ್ಸು ಇಲ್ಲವಾಗಿದೆ.

ಈ ವಿಷಯ ಮಹತ್ವವಾದುದು....ಪಕ್ಕಾ ದಿಸಸ್ಸನ್ನು ಹೆಚ್ಚಾಗಿ ಸರಬರಾಯಿ ಮಾಡಬೇಕು. ಸೇನೆಯ ಆವಶ್ಯಕತೆಗಳು ಮೊದಲು ಎಂಬುದು ನಮಗೆ ಗೊತ್ತು. ಅದು ಮುಗಿದೊಡನೆ ಮೊದಲು ರೈತನ ಆವಶ್ಯಕತೆಗೆ ಗಮನ ಕೊಡಬೇಕು. ದೇಶದ ಆಹಾರ ಸರಬರಾಯಿ, ದೇಶದ ಯುದ್ಧ ಪ್ರಯತ್ನ ಸಾಮರ್ಥ್ಯಗಳ ಸಂಬಂಧ ಗೊತ್ತಿದ್ದವರಿಗೆ ಇವನ್ನು ಹೇಳಬೇಕಾಗಿಯೇ ಇಲ್ಲ. ಮೇಲೆ ಹೇಳಿದ ಕಾರಣಗಳಿಂದ ಬಲಾತ್ಕಾರವಾಗಿ ಧಾನ್ಯಸಂಗ್ರಹ ಮಾಡುವ ಪದ್ಧತಿಯನ್ನು ಚೆನ್ನಾಗಿ ಯೋಚಿಸದೆ ಪ್ರಾರಂಭಿಸಬಾರದೆಂದೂ, ಇದ್ದದ್ದನ್ನು—ಯೋಗ್ಯ ಧಾರಣೆಗೇ ಆದರೂ—ಬಲವಂತವಾಗಿ ಸೆಳೆದು ತರುವುದಕ್ಕಿಂತ ಹೆಚ್ಚು ಆಹಾರ ಬೆಳೆವ ಚಳುವಳಿಯಿಂದ ಹೆಚ್ಚು ಸಾಮಗ್ರಿ ತಯಾರಿಸುವುದೇ ಒಳಿತೆಂದೂ ನಾವು ಭಾವಿಸುತ್ತೇವೆ. ಬರೀ ಬಟ್ಟೆ, ಔಷಧಿ ತಯಾರು ಮಾಡಿದರೆ ಸಾಲದು. ಇನ್ನೂ ರೈತರಿಗೆ ಬೇಕಾದ್ದು, ಎಷ್ಟೋ ಸಾಮಾನು ಇವೆ. ಕಬ್ಬಿಣ, ಉಕ್ಕು, ಮರ, ಮನೆ ಕಟ್ಟುವ ಸಾಮಗ್ರಿ, ಬೇಸಾಯದ ಮುಟ್ಟು ಇತ್ಯಾದಿ.

'ದಾಸ್ತಾನುಗಾರ' ರೈತನ ಇನ್ನೊಬ್ಬ ಗೆಳೆಯ ಸರ್ ಗೆವಿನ್ ಜೋನ್ಸ್. ಆತ ಹೇಳಿದಾನೆ :

"ಈಗಿನ ಹಾಗೆ ಧಾರಣೆ ಏರುತ್ತಲೇ ಇದ್ದರೆ ಬೆಲೆ ಸಿಗದಿ, ದಾಸ್ತಾನು ಕರಗುವಡಿ ಪ್ರಯತ್ನ ವ್ಯರ್ಥ." ಸರ್ ಡಿಸ್ಬಿ ಡ್ರೇಕ್-ಬ್ರಾಕ್‌ಮನ್ ಹೇಳಿದ್ದನ್ನು ಜೋನ್ಸ್ ಎತ್ತಿ ಹೇಳಿದ:

ಹಳ್ಳಿಯವನಿಗೆ ಹಣ-ನೋಟು-ಬೇಕಾಗಿಲ್ಲ, ಪದಾರ್ಥ ಬೇಕು. ಒಳ್ಳೆ ಕಾಲದಲ್ಲಿ ತನ್ನ ಬೆಳೆಯ ಲಾಭಕ್ಕೆ ಬೆಳ್ಳಿ ಬಂಗಾರ ಕೊಳ್ಳುತ್ತಾನೆ. ಹಣ ಕೂಡಿಡುವುದಿಲ್ಲ. ಈಗ ಬೆಳ್ಳಿಯೂ ಇಲ್ಲ, ಬಂಗಾರವೂ ಇಲ್ಲ. ರೂಪಾಯಿಯ ಬೆಲೆ ಎರಡಾಣೆ ಬೆಳ್ಳಿ. ಹಳ್ಳಿಯವನಿಗೆ ರೂಪಾಯಲ್ಲಿ ನಂಬಿಗೆಯಿಲ್ಲ ; ಬೆಳ್ಳಿ ಬಂಗಾರ ಸಿಗುವುದಿಲ್ಲ; ಆದ್ದರಿಂದ ತನ್ನ ಕಾಳನ್ನೇ ತೆಗೆದಿಟ್ಟದ್ದರೆ ಎಂದಾದರೂ ಬೆಲೆ ಬಂದೀತೆಂದು ತಿಳಿಯುತ್ತಾನೆ."

ಸರಬರಾಯಿ ಸಚಿವರಿಗೆ ನನ್ನ ಉತ್ತರ ಇದು : ರೈತ ತನ್ನ ಧಾನ್ಯವನ್ನು ಮಾರಲಿಕ್ಕೆ ಇಷ್ಟಪಡದಿರಲು ಕಾರಣಭೂತರು ಈ ದೇಶದಲ್ಲಿ ೬೦೦ ಕೋಟಿ ನೋಟುಗಳನ್ನು ತೂರಿದವರು. ಪ್ರಜಾಭಿಪ್ರಾಯದ ಬೆಂಬಲವಿದ್ದ ಸುವ್ಯವಸ್ಥಿತವಾದ ಪ್ರಭುತ್ವ, ದೇಶದ ಆರ್ಥಿಕ ಸಾಮಾಜಿಕ ನಾಡಿಗಳನ್ನು ಹಿಡಿತದ

ಲ್ಲಿಟ್ಟುಕೊಂಡು ಹಣ ಹಿಗ್ಗಿಸಿ ಕೂಡ ಈ ದುಷ್ಪರಿಣಾಮಗಳನ್ನು ತಡೆದೀತು. ಹಿಂದುಸ್ಥಾನದ ಬ್ರಿಟಿಷ್ ಸರಕಾರ ಅಂಥ ಪ್ರಭುತ್ವವಲ್ಲ. ಅದಕ್ಕೆ ಪ್ರಜಾಭಿಪ್ರಾಯದ ಬೆಂಬಲವೂ ಇಲ್ಲ, ಸಾಮಾಜಿಕ ಆರ್ಥಿಕ ವ್ಯವಸ್ಥೆಯೂ ಇಲ್ಲ. ಮುಖ್ಯವಾಗಿ ಇದು 'ಪೋಲೀಸ್ ರಾಜ್ಯ.' ಆಡಳಿತದ ಓನಾಮವನ್ನು ತಿದ್ದುತ್ತಿರುವಂಥ ಅಪ್ರಬುದ್ಧ ಪ್ರಭುತ್ವ. ಈ ಬಗೆಯಲ್ಲಿ ಇಷ್ಟು ವೇಗವಾಗಿ ಹಣವನ್ನು ಹಿಗ್ಗಿಸುವ ಆಟ ಆಡಬಾರದು. ಅವರ ಕೈಯಲ್ಲಿ ಮರಪಂಡಿತನ ರಸವೈದ್ಯಕ್ಕೆ ತುತ್ತಾಗಿ ಉಸಿರು ಬಿಡುತ್ತಿರುವ ರೋಗಿಯಂತಿದೆ ಹಿಂದುಸ್ಥಾನ.

ಈಗ ಯುದ್ಧ ಮಾಡುತ್ತಿರುವ ಸ್ವತಂತ್ರ ರಾಷ್ಟ್ರಗಳಿಗೂ ನಮಗೂ ಇರುವ ವ್ಯತ್ಯಾಸವನ್ನು ಈ ಪಟ್ಟಿ ತಿಳಿಸುತ್ತದೆ.

(ಜನವರಿ–ಜೂನ್ ೧೯೩೯=೧೦೦)

| | ಸಗಟು ಬೆಲೆ | | | | ಜೀವನ ಸೂಚಿ | | | |
|---|---|---|---|---|---|---|---|---|
| | ೧೯೪೦ | ೪೧ | ೪೨ | ೪೩ | ೪೦ | ೪೧ | ೪೨ | ೪೩ |
| ಬ್ರಿಟನ್ | ೧೪೦ | ೧೫೭ | ೧೬೪ | ೧೬೭ | ೧೨೧ | ೧೨೯ | ೧೩೦ | ೧೩೦ |
| ಜರ್ಮನಿ | ೧೦೩ | ೧೦೫ | ೧೦೭ | ೧೦೯ | ೧೦೩ | ೧೦೬ | ೧೦೮ | ೧೧೦ |
| ಅಮೆರಿಕಾ | ೧೦೩ | ೧೧೪ | ೧೨೯ | ೧೩೬ | ೧೦೧ | ೧೦೬ | ೧೧೮ | ೨೬ |
| ಕೆನಡಾ | ೧೧೩ | ೧೨೩ | ೧೩೧ | ೧೩೬ | ೧೦೫ | ೧೧೨ | ೧೧೬ | ೧೧೮ |
| ಆಸ್ಟ್ರೇಲಿಯ | ೧೧೦ | ೧೧೭ | ೧೩೧ | ೧೩೫ | ೧೦೪ | ೧೧೦ | ೧೧೯ | — |
| ಹಿಂದುಸ್ಥಾನ | ೧೨೧ | ೧೪೧ | ೧೮೭ | ೩೨೯ | ೧೦೮ | ೧೨೦ | ೧೫೧ | ೨೧೯ |
| | | ಏಪ್ರಿಲ್ | | | | | ಫೆಬ್ರವರಿ | |

ಈ ಸತ್ಯ ಇಂಗ್ಲೆಂಡಿಗೂ ಮುಟ್ಟಿದೆ. ಬ್ರಿಟಿಷ್ ಕೂಲಿಗಾರ ಪಕ್ಷದ ಅರ್ಥನಿಪುಣ ಪೆಥಿಕ್ ಲಾರೆನ್ಸ್ ೧೯೪೩ ನವಂಬರ್ ೪ರಲ್ಲಿ ಹೌಸ್ ಆಫ್ ಕಾಮನ್ಸ್‌ನಲ್ಲಿ ಹೀಗೆ ಹೇಳಿದರು :

"ಅನೇಕ ಪ್ರಾಂತಗಳಲ್ಲಿ ತಮ್ಮ ಜೀವನಕ್ಕೆ ಬೇಕಾದ ಕಾಳನ್ನು ಕೊಳ್ಳುವ ಶಕ್ತಿ ಜನಕ್ಕಿಲ್ಲವಾಗಿದೆ. ಈ ಬರಕ್ಕೆ ಅದೇ ಕಾರಣ. ಈ ತುಟ್ಟಿ

ಬೆಲೆಗೆ ಹಿಗ್ಗಿದ ರೂಪಾಯೇ ಕಾರಣ. ಈ ಹಿಗ್ಗುವಿಕೆಗೆ ಭಾರತ ಸರಕಾರ ವಲ್ಲದೆ ಬೇರೆ ಯಾರೂ ಜವಾಬ್ದಾರರಲ್ಲ."

ಹೀಗೇ ೧೯೪೩ ನವಂಬರ್ ೨೦ರಲ್ಲಿ ಲಂಡನ್ನಿನ 'ನ್ಯೂ ಸ್ಟೇಟ್ಸ್‌ಮನ್' ಹೇಳಿತು :—

"ಅಕ್ಕಿ ರಪ್ತು ಕಡಮೆಯಾದದ್ದು ಅಷ್ಟು ಮುಖ್ಯವಲ್ಲ. ಈಗ ನಾಲ್ಕು ವರ್ಷದಿಂದ ಒಂದೇ ಸವನೆ ಏರುತ್ತಿರುವ ಧಾರಣೆಗಳು ಮುಖ್ಯ. ಮೊನ್ನೆ ಮೊನ್ನೆ ಬರ ಬಂದು ಸಾವಿರಾರು ಜನ ಸಾಯುವತನಕ ದಿಲ್ಲಿ ಸರಕಾರವೂ ಇಂಡಿಯಾ ಕಛೇರಿಯೂ ಸುಮ್ಮನೆ ಕೈಕಟ್ಟಿಕೊಂಡು ಕುಳಿತಿದ್ದವು. ಜನರನ್ನು ಬಲಾತ್ಕಾರ ಮಾಡಬೇಕಾದಾಗಲೇ ಅವರ ಸೋಮಾರಿತನಕ್ಕೆ ಸ್ವಸ್ತಿ."

ಹಣದ ಹಿಗ್ಗು ಅದರ ಆರ್ಥಿಕ ಮಾನಸಿಕ ಪರಿಣಾಮಗಳೇ ಈಗಿನ ಆಹಾರ ಪರಿಸ್ಥಿತಿಗೆ ಕಾರಣವೆಂದು ಹೇಳಿದರೆ ಹೆಚ್ಚಾಗಲಾರದು. ಇದಲ್ಲದೆ ಇನ್ನೂ ಹಲವಾರು ಕಾರಣ ಇವೆ: ಅಸಮರ್ಥ ಆಡಳಿತ, ವಾಹನ ಅಸೌಕರ್ಯ, ಯುದ್ಧ ಪರಿಣಾಮ (೫ನೆ ಅಧ್ಯಾಯದಲ್ಲಿ ಹೇಳಿದುದು) ಗಳೂ ತಮ್ಮ ಕೈವಾಡ ತೋರಿಸಿವೆ. ಬಂಗಾಳದಲ್ಲಿ ಇವುಗಳ ಪ್ರಭಾವ ಹೆಚ್ಚಾದ್ದರಿಂದ ಅಲ್ಲಿ ಅದರ ಪರಿಣಾಮ ಭಯಂಕರವಾಯಿತು.

## ೭
## ಯಾರು ಹೊಣೆ?

ಹಾಗಾದರೆ ಇದಕ್ಕೆ ಏನು ಪರಿಹಾರ? ಕೂಡಲೇ ಏನು ಮಾಡಬೇಕು? ಕೂಡಲೆ ಮಾಡಬೇಕಾದುದಿಷ್ಟೆ: ಈ ಹಣದ ಹಿಗ್ಗಿನ ಕೆಟ್ಟ ಪರಿಣಾಮವನ್ನು ತಡೆಯಲು ಹೊರಗಿನಿಂದ ಆಹಾರವನ್ನು ಆಮದು ಮಾಡಬೇಕು. ಹಣದ ಹಿಗ್ಗು ಇನ್ನೂ ನಡೆಯುತ್ತಲೇ ಇದೆ. ಸೆಪ್ಟೆಂಬರ್ ೧೯೪೩ರಲ್ಲಿ ೭೬೦ ಕೋಟಿ ಇದ್ದದ್ದು ಅಕ್ಟೋಬರಿನಲ್ಲಿ ೭೭೪ ಕೋಟಿ ನೋಟಾಯಿತು. ಇದು ಈ ಕ್ಷಣವೇ ನಿಲ್ಲಬೇಕು. ಇದೇ ಸಾಲದು. ಇಲ್ಲಿಯವರೆಗೆ ಪದಾರ್ಥ ಮಾತ್ರ ಇದ್ದಷ್ಟೇ ಇದ್ದು ಹಣ ಮಾತ್ರ ಹೆಚ್ಚಿ ಹೋದ ಹಾಗೆ, ಇನ್ನು ಮೇಲೆ ಹಣ ಇದ್ದಷ್ಟೇ ಇದ್ದು ಸಾಮಾನು ಸರಬರಾಯಿ ಹೆಚ್ಚುತ್ತ ಹೋಗಬೇಕು. ಹಾಗೆ ಮಾಡಲು

ಈ ದೇಶದಲ್ಲಿ ಬೆಳೆ ಹೆಚ್ಚಾಗಬೇಕು ; ಸಾಮಾನು ತಯಾರಿ ಹೆಚ್ಚಾಗಬೇಕು. ಈಗ ಉತ್ಪತ್ತಿ ಸಾಮರ್ಥ್ಯವೆಲ್ಲ ಯುದ್ಧ ಸಾಮಗ್ರಿಗಳ ತಯಾರಿಯಲ್ಲೇ ಮುಗಿಯುತ್ತಿದೆ. ಸೇನೆಗೆ ಸಾಮಾನು ಒದಗಿಸುವ ಕೆಲಸವನ್ನು ನಮ್ಮ ಕಾರಖಾನೆಗಳಿಗೆ ತಪ್ಪಿಸಿ ಅವರು ತಮಗೆ ಬೇಕಾದ್ದನ್ನು ಹೊರಗಿನಿಂದ ಆಮದು ಮಾಡಿಕೊಳ್ಳುವಂತೆ ಮಾಡಬೇಕು. ಇಷ್ಟಾದರೂ ಭಾರತೀಯ ಉದ್ಯೋಗಕ್ಕೆ ತನ್ನ ಉತ್ಪತ್ತಿಯನ್ನು ಹೆಚ್ಚಿಸಲು ಸಾಧನಸಂಪತ್ತು ಕಡಿಮೆ. ಅದಕ್ಕಾಗಿ ಹೊರಗಿನಿಂದ ಯಂತ್ರ ಸಾಮಗ್ರಿಗಳನ್ನು ತರಿಸಬೇಕು. ಹಾಗೇ ರೈತರಿಗೆ ಹೆಚ್ಚು ಆಹಾರ ಬೆಳೆಯಲು ಗೊಬ್ಬರಗಳನ್ನು ತರಿಸಿ ಕೊಡಬೇಕು. ಗ್ರಿಗರಿ ಸಮಿತಿಯವರು ಹೇಳಿದುದು ಸರಿ: ಭಾರತವು ೧೫ ಲಕ್ಷ ಟನ್ ಆಹಾರ ಪದಾರ್ಥವನ್ನು ಪ್ರತಿವರ್ಷವೂ ಆಮದು ಮಾಡಬೇಕು; ಹಿಂದುಸ್ಥಾನ ಈ ಬಗ್ಗೆ ಆಮದು ಸೀಮೆ. ಈ ೧೫ ಲಕ್ಷ ತೀರ ಕಡಮೆ. ನಮಗೆ ಕಡಮೆ ಬೀಳುವ ಆಹಾರ ಧಾನ್ಯ ವರ್ಷಕ್ಕೆ ೧ ಕೋಟಿ ಟನ್ ಎಂದು ಕೂಡಲೇ ನಾನು ಹೇಳಿದೇನೆ. ಅವರ ಮೇಲೆ ಸೇನೆಯ ಗಿರಾಕಿ ಬೇರೆ.

ಎಲ್ಲಕ್ಕಿಂತ ಹೆಚ್ಚಾಗಿ ಹಣದ ಹಿಗ್ಗಿನ ದುಷ್ಪರಿಣಾಮಗಳನ್ನು ನಿವಾರಿಸಬೇಕು. ರೈತರಿಗೆ ತಮ್ಮ ಹಣಕ್ಕೆ ಚ್ಯುತಿಯಿಲ್ಲ, ಅವರ ಬೆಲೆಯು ಸರಿಯಾಗಿದ್ದೀತು, ಅವರಿಗೆ ಬೇಕಾದ ಸಾಮಾನು ಸಿಕ್ಕೀತು ಎಂಬ ನಂಬಿಗೆ ಹೆಚ್ಚಿಸಬೇಕು. ಹಾಗಲ್ಲದೆ ಬಲಾತ್ಕಾರವಾಗಿ ದವಸವನ್ನು ವಸೂಲು ಮಾಡುವುದರಿಂದ ಆ ಅಪನಂಬಿಕೆಗೆ ಉತ್ತರ ಕೊಟ್ಟರೆ, ಉರಿವ ಗಾಯಕ್ಕೆ ಉಪ್ಪು ಸವರಿದಂತಾಗಿ ಮಾಡಬಾರದ್ದನ್ನೇ ಹುಡುಕಿ ಮಾಡಿದಂತಾಗುತ್ತದೆ.

ಹಿಂದುಸ್ಥಾನ ಆಹಾರದಲ್ಲಿ ಸ್ವಯಂಸಂಪೂರ್ಣ ದೇಶವಲ್ಲ. ಹೇರಳವಾಗಿ ಪದಾರ್ಥಗಳನ್ನು ಆಮದುಮಾಡದೆ ಇದ್ದರೆ ಯಾವ ಪರಿಹಾರೋಪಾಯವೂ ಸಾಧ್ಯವಿಲ್ಲ.

ಆದರೆ ಹಡಗಿನ ಸೌಕರ್ಯವಿಲ್ಲ ಎಂದು ಬ್ರಿಟಿಷ್ ಸರಕಾರದವರು ಹೇಳುತ್ತಾರೆ. ಈ ಮಾತನ್ನು ಈ ದೇಶದಲ್ಲಿ ಯಾರೂ ನಂಬರು. ವಿಸ್ಕಿ, ಸಿಗರೇಟು, ರೇಡಿಯೋ, ಬ್ಲೇಡುಗಳನ್ನು ಆಮದುಮಾಡಲು ಹಡಗಿನಲ್ಲಿ ಸ್ಥಳವಿರುವುದನ್ನು ನೋಡಿದರೆ-ಈ ಅಪನಂಬಿಕೆ ತಪ್ಪೆಂದು ಯಾರೂ ಹೇಳಲಾರರು. ೧೯೪೩ ಸೆಪ್ಟಂಬರ್ ೨೪ರಲ್ಲಿ ದಿಲ್ಲಿಯ ಈಸ್ಟರ್ನ್ ಎಕಾನಮಿಸ್ಟ್ ಪತ್ರಿಕೆ - ಒಳ್ಳೆ ತಿಳಿದ

ಪತ್ರಿಕೆ - ಬ್ರಿಟನ್ನಿಗೆ ೬೦-೭೦ ಲಕ್ಷ ಟನ್ ಸಾಮಾನು ತರುವಷ್ಟು ಅವಕಾಶ ವಿದೆ ಎಂದು ವರದಿಮಾಡಿತು. ಆದರೆ ಇಲ್ಲಿಯವರೆಗೆ ೪೧ ಸಾವಿರ ಟನ್ ಧಾನ್ಯ ತುಂಬಿದ ೫ ಹಡಗು ಮಾತ್ರ ಹಿಂದುಸ್ಥಾನಕ್ಕೆ ಬಂದಿವೆ. (ಇನ್ನೂ ೪ ಹಡಗು ಈಗ ತಾನೆ ಬಂದಿವೆಯಂತೆ.) ಹೀಗಾದರೆ ಗ್ರೆಗರಿ ಸಮಿತಿಯ ಈ ಒಂದು ಸೂಚನೆಯನ್ನು ನಡಸಲು ಎಷ್ಟು ವರ್ಷ ಬೇಕಾದೀತೋ?

ಇಷ್ಟೆಲ್ಲ ವಿಷಮ ಪರಿಸ್ಥಿತಿ ಬರಲು ಕಾರಣ ಹಿಂದುಸ್ಥಾನವನ್ನು ಹೇಳದೆ ಕೇಳದೆ ವೈಸರಾಯ್ ಯುದ್ಧಕ್ಕೆ ನೂಕಿದ್ದು. ಈ ದೇಶದ ಜನರನ್ನಾಗಲಿ ಶಾಸನ ಸಭೆಯನ್ನಾಗಲಿ ಕೇಳದೆಯೆ, ಸರ್ವಮಾನ್ಯವಾದ ರಾಜಕೀಯ ಸಂಸ್ಥೆ ವಿರೋಧಿಸಿದರೂ ಕೂಡ ಈ ದೇಶವನ್ನು ಯುದ್ಧಕ್ಕೆ ನೂಕಿದಾರೆ. ಆದ್ದರಿಂದ ಯಾರು ಈ ಯುದ್ಧವನ್ನು ತಲೆಯ ಮೇಲೆ ಹೊರಿಸಿದರೋ ಅವರೇ ಹಿಂದುಸ್ಥಾನಕ್ಕೆ ಆಹಾರ ಒದಗಿಸಬೇಕು. ಶಾಸನಸಭಾ ಸದಸ್ಯರಾದ ಶ್ರೀ ಶಿವ ರಾಜರು ಹೇಳಿದ ಮಾತಿಗಿಂತ ಒಳ್ಳೆ ಮಾತಿಲ್ಲ:

"ಬ್ರಿಟಿಷ್ ಸರಕಾರ ಬಲವಂತವಾಗಿ ಯುದ್ಧವನ್ನು ಹಿಂದುಸ್ಥಾನದ ಕೊರಳಿಗೆ ಕಟ್ಟಿದೆ. ಈ ಯುದ್ಧವನ್ನು ಪ್ರಾರಂಭಿಸಿದವರೇ ಹಿಂದುಸ್ಥಾನದ ಜನಕ್ಕೆ ಆಹಾರ ಸರಬರಾಯಿ ಮಾಡುವ ಹೊಣೆಯನ್ನು ಹೊರಬೇಕು."

---

ಮುದ್ರಕರು :
ಎಚ್. ಎಲ್. ಪ್ರಸಾದ್,
ಟಾರ್ಚ್ ಪ್ರೆಸ್, ಪತ್ರಪ್ಪ ರೋಡ್, ಬೆಂಗಳೂರು ನಗರ

# ದಿ ನ್ಯೂ ಏಷ್ಯಾಟಿಕ್ ಇನ್‌ಷೂರೆನ್ಸ್ ಕಂಪೆನಿ, ಲಿಮಿಟೆಡ್.

(ಇನ್‌ಕಾರ್‌ಪೊರೇಟೆಡ್ ಇನ್ ಬ್ರಿಟಿಷ್ ಇಂಡಿಯ. ಲಯಬಿಲಿಟಿ ಆಫ್ ಮೆಂಬರ್ಸ್ ಲಿಮಿಟೆಡ್)

---

**ಹೋದ ವರ್ಷಕ್ಕೆ ದ್ವಿಗುಣ ವ್ಯವಹಾರ !**

೧ ಕೋಟಿ ರೂಪಾಯಿಗಿಂತ ಹೆಚ್ಚು ಆದಾಯ.

## ಜೀವವಿಮೆ, ಅಗ್ನಿವಿಮೆ, ಆಕಸ್ಮಿಕ ವಿಮೆ ಇವುಗಳನ್ನು ಅಂಗೀಕರಿಸುತ್ತಿದೆ.

?

ಮೈಸೂರು ಸಂಸ್ಥಾನದಲ್ಲೆಲ್ಲೂ ಪ್ರಭಾವಶಾಲಿಗಳೂ ಗೌರವನೀಯರೂ ಆದವರು ಪ್ರತಿನಿಧಿಗಳಾಗಿ ಕೆಲಸ ಮಾಡಲು ಬೇಕು. ಉದಾರ **ಕಮಿಷನ್ ಅಥವಾ ಸಂಬಳ ಅಥವಾ ಎರಡೂ.**



**ವಿವರಗಳಿಗೆ ಬರೆಯಿರಿ :—**

ಪ್ರಧಾನ ಕಛೇರಿ :
**ನ್ಯೂ ಏಷ್ಯಾಟಿಕ್ ಬಿಲ್ಡಿಂಗ್ಸ್**
**ನವದೆಹಲಿ**

ಮದರಾಸು ಅಂಗ ಕಾರ್ಯಾಲಯ :
**೨೮೯, ಲಿಂಗಚೆಟ್ಟಿ ಬೀದಿ,**
**ಜಿ. ಟಿ. ಮದರಾಸು**

---

ಮೈಸೂರು ಸಂಸ್ಥಾನದ ಕಛೇರಿ :

**ಸುಲ್ತಾನ್ ಪೇಟೆ, ಬೆಂಗಳೂರು ಸಿಟಿ.**

ಆರ್ಗನೈಸರ್ : **ಗುಡಿಬಂಡೆ ರಾಮರಾವ್.**